Vol - 12 May 2013 Issue No. 05 ₹ 5.00/-

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರಿಕೆ

# Karnataka Scout & Guide

*News Magazine*



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯಿಂದ

## ಹಾರ್ದಿಕ ಅಭಿನಂದನೆಗಳು



**ಶ್ರೀ ಸಿದ್ದರಾಮಯ್ಯ**

ಸನ್ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ



**ಶ್ರೀ ಆರ್.ವಿ. ದೇಶಪಾಂಡೆ**

ಮಾನ್ಯ ಉನ್ನತ ಶಿಕ್ಷಣ ಹಾಗೂ
ಪ್ರವಾಸೋದ್ಯಮ ಇಲಾಖೆಗಳ ಸಚಿವರು, ಕರ್ನಾಟಕ ಸರ್ಕಾರ



**ಶ್ರೀ ಕಿಮ್ಮನೆ ರತ್ನಾಕರ್**

ಮಾನ್ಯ ಪ್ರಾಥಮಿಕ ಹಾಗೂ
ಪ್ರೌಢಶಿಕ್ಷಣ ಇಲಾಖೆಗಳ ಸಚಿವರು, ಕರ್ನಾಟಕ ಸರ್ಕಾರ




**Participants of State Level 'Training Team Meet ' at Port Blair, Andaman & Nicobar from 25th to 30th April 2013**



ದಿನಾಂಕ 12.04.2013ರಂದು ದಾವಣಗೆರೆ ಜಿಲ್ಲಾ ಸ್ಕೌಟ್ ಭವನದಲ್ಲಿ ಜರುಗಿದ "ಮತದಾನ ಜಾಗೃತ ಆಂದೋಲನ" ಕಾರ್ಯಕ್ರಮದಲ್ಲಿ ಜಿಲ್ಲಾಧಿಕಾರಿ ಶ್ರೀ ಎಸ್. ಎಸ್. ಪಟ್ಟಣಶೆಟ್ಟಿ, ಭಾ.ಆ.ಸೇ., ಶ್ರೀ ಡಿ.ಕೆ. ಶಿವಕುಮಾರ್, ಉಪನಿರ್ದೇಶಕರು, ಸಾ.ಶಿ.ಇಲಾಖೆ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಚಿಗಟೇರಿ, ಹಾಗೂ ಇತರ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಕೊಪ್ಪಳ ಜಿಲ್ಲಾಧಿಕಾರಿಗಳಾದ ಶ್ರೀಮತಿ ತುಳಸಿ ಮದ್ದಿನೇನಿ, ಭಾ.ಆ.ಸೇ. ಇವರು ಜಿಲ್ಲಾ ಪುರಸ್ಕಾರ ಪ್ರಶಸ್ತಿಯನ್ನು ಸ್ವಾಮಿ ವಿವೇಕಾನಂದ ಪ್ರೌಢಶಾಲೆಯ ಸ್ಕೌಟ್‌ಗೆ ನೀಡುತ್ತಿರುವುದು



ದಿನಾಂಕ 06.04.2013ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆ ತ್ಯಾಮಗೊಂಡ್ಲು ಸರ್ಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ನಡೆದ ರೇಂಜರ್ ಘಟಕದ ವಾರ್ಷಿಕ ಚಟುವಟಿಕೆಗಳ ಸಮಾರೋಪ ಸಮಾರಂಭ ಹಾಗೂ ಪ್ರಶಸ್ತಿ ಪ್ರಧಾನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಶ್ರೀಮತಿ ಬಿ.ವಿ. ರಾಮಲತ ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್), ಪ್ರಾಂಶುಪಾಲರಾದ ಶ್ರೀ ಶ್ಯಾಮಸುಂದರ್ ಎಸ್. ಕೋಟಿ, ಎ.ಎಸ್.ಓ.ಸಿ.ಗಳಾದ ಶ್ರೀ ಎಸ್. ಓಮೇಶ್ವರಯ್ಯ, ಶ್ರೀಮತಿ ಶ್ಯಾಮಲ ಇತರರನ್ನು ಕಾಣಬಹುದು.

# *Editorial*

Scouts around the world are joining hands together this month to strengthen global forces against the number one cause of death for young people, road accidents. Annually, over 1.2 million people die on roads in a cause that can easily be tackled with a joint action. The Second UN Global Road Safety Week (every five years) took place from 6th to 12th May 2013. On 6th and 7th May, 30 Rover Scouts and leaders from 14 countries came together for a series of events at the United Nations premises in Geneva on the invitation of Scouting Ireland, Scouts of Greece and the Greek-Hellenic Road Safety Institute 'Panos Mylonas'. The events were supported and hosted by the United Nations Economic Commission for Europe (UNECE). 2011 to 2020 is also the 'Decade of Action for Road Safety' promoted by the United Nations.

I recollect services rendered by our young Scouts/ Guides in many places helping police to manage traffic and also on many occassions they help public in Traffic Control. On the same line we can create another mile stone in Karnataka by creating awareness on safety driving and speed driving. Since Rovers/ Ranger units are coming up all over the state, a state level project can be thought of and this young college going youth can surely bring in a change among public. In recent years our capital city Bangalore has seen drastic change in the traffic sense as no one cares the pedestrians, least bothered about turns/ traffic signals and many a times speed has taken over safety. Same is the situation prevailing in other cities like Mysore, Mangalore, Gulbarga, Bellary, Hubli-Dharwar etc.

On the other hand there is noise pollution on the rise. While driving, every one is busy with mobiles and care the least for others who are driving on the road. Such careless & reckless attitude is another reason for unnecessary horning and noise pollution is the result. Further this sort of habits by two wheeler riders takes them to major accidents and lives are on risk.

So by keeping par with UN and WOSM, Karnataka should come up with novel ideas in Traffic control and Road Safety. Hope all our adult Scouts/ Guides will take a note of the serious issue and start planning, sending their plan to state professionals for making it workable.

**M.A. KHALID**
State Secretary

# ರಾಜ್ಯ ಮುಖ್ಯ ಆಯುಕ್ತರ ನುಡಿ.................................

ಆತ್ಮೀಯರೆ,

2013-14ನೇ ಶೈಕ್ಷಣಿಕ ವರ್ಷ ಜೂನ್ ಮೊದಲವಾರ ಪ್ರಾರಂಭವಾಗಿದೆ. ಹೋದ ತಿಂಗಳ ನನ್ನ ಮಾತುಗಳಲ್ಲಿ ರಾಜ್ಯದ ಎಲ್ಲಾ ಹಂತಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನನ್ನ ಸಹೋದ್ಯೋಗಿಗಳಿಗೆ ಸೂಚಿಸಿದಂತೆ, ವರ್ಷದ ಪ್ರಾರಂಭದಲ್ಲೇ ಘಟಕಗಳ ನಾಯಕ-ನಾಯಕಿಯರು ತಮ್ಮಗಳ ವಾರ್ಷಿಕ ಯೋಜಿತ ಕಾರ್ಯಕ್ರಮಗಳ ಪಟ್ಟಿಮಾಡಿ-ಕಬ್-ಬುಲ್‌ಬುಲ್, ಸ್ಕೌಟ್-ಗೈಡ್‌ಗಳಿಗೆ ಸೂಕ್ತ ತರಬೇತಿ ನೀಡಿ ಅವರುಗಳನ್ನು ರಾಜ್ಯ ಪುರಸ್ಕಾರ ಪ್ರಶಸ್ತಿ, ರಾಷ್ಟ್ರಪತಿ ಪ್ರಶಸ್ತಿ ಪಡೆಯುವಂತೆ ಮಾಡುವಲ್ಲಿ ಯಶಸ್ವಿಯಾಗಬೇಕೆಂದು ತಿಳಿಸಿದ್ದುದು ಸರಿಯಷ್ಟೆ. ಆ ರೀತಿ ಕಾರ್ಯಪ್ರವೃತ್ತರಾಗಿರುವಿರೆಂದು ಆಶಿಸುತ್ತೇನೆ.

ನಾನು ಭಾಗವಹಿಸಿದ ಎಲ್ಲಾ ಸಭೆ-ಸಮಾರಂಭ ಹಾಗೂ ತರಬೇತಿ ಶಿಬಿರಗಳಲ್ಲಿ ಈಗಾಗಲೇ ತಿಳಿಸಿರುವಂತೆ ಹಾಗು ಕಳೆದ ತಿಂಗಳು ರಾಜ್ಯದ ವಾರ್ತಾ ಪತ್ರಿಕೆಯಲ್ಲಿ ರಾಜ್ಯದ ವೃಕ್ಷಮಣಿಧಾರಕರಿಗೆ, ನಾಯಕ ಹಾಗು ಸಹಾಯಕ ನಾಯಕ ತರಬೇತಿದಾರರಿಗೆ ಮತ್ತು ಘಟಕಗಳ ನಾಯಕ-ನಾಯಕಿಯರುಗಳಿಗೆ ಮನವಿ ಮಾಡಿರುವಂತೆ, ನನ್ನ ಮತ್ತು ನಿಮ್ಮಗಳೆಲ್ಲರ ಆಸೆ-ಆಕಾಂಕ್ಷೆ-ಅಪೇಕ್ಷೆ ಕಾರ್ಯಗತವಾಗಬೇಕಾದರೆ ರಾಜ್ಯದ ಪ್ರತಿ ಘಟಕವನ್ನೂ ಮುನ್ನಡೆಸುತ್ತಿರುವ ನಾಯಕ-ನಾಯಕಿಯರು ಕನಿಷ್ಠ ವೃಕ್ಷಮಣಿ ಪದಕ ಪುರಸ್ಕೃತರಾಗಬೇಕೆಂದು ರಾಜ್ಯದ ಎಲ್ಲಾ ಘಟಕಗಳ ನಾಯಕ-ನಾಯಕಿಯರಲ್ಲಿ ಮನವಿ ಮಾಡುತ್ತೇನೆ.

ಶತಮಾನದ ಉದಾತ್ತ ಪರಂಪರೆ-ಸಂಸ್ಕೃತಿ-ಇತಿಹಾಸವುಳ್ಳ ಸ್ಕೌಟ್-ಗೈಡ್ ಚಳವಳಿ ಲಕ್ಷಾಂತರ ಯುವಕ-ಯುವತಿಯರನ್ನು ಉತ್ತಮ ಆದರ್ಶ ಹಾಗೂ ಸುಶಿಕ್ಷಿತ ವ್ಯಕ್ತಿಗಳನ್ನಾಗಿ ರೂಪಿಸುವಲ್ಲಿ ತನ್ನ ಕಾರ್ಯವನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರ್ವಹಿಸಿರುವುದನ್ನು ನಾವುಗಳೆಲ್ಲರೂ ಬಲ್ಲೆವು. ವೈಯಕ್ತಿಕವಾಗಿ ಅದರ ಫಲವನ್ನು ಅನುಭವಿಸುತ್ತಿರುವ ಸಹಸ್ರಾರು ಸಹೋದ್ಯೋಗಿಗಳು ನಮ್ಮೆಲ್ಲರೊಟ್ಟಿಗಿದ್ದಾರೆ. ಅವರುಗಳು ಚಳವಳಿಯಲ್ಲಿ ಹೊಂದಿದ ಅಪಾರವಾದ ಜ್ಞಾನಾರ್ಜನೆ ಹಾಗು ಆತ್ಮವಿಶ್ವಾಸದ ಮಾತುಗಳನ್ನು ಕೇಳಿ ಪುಳಕಿತಗೊಂಡವರಲ್ಲಿ ನಾನೂ ಒಬ್ಬ.

ಇಂದಿಗೂ ಸಹಸ್ರಾರು ಯುವಕ-ಯುವತಿಯರು ಚಳವಳಿಯ ವಿವಿಧ ಹಂತಗಳಲ್ಲಿ ವಿವಿಧ ಪದಕ-ಪ್ರಶಸ್ತಿಗಳನ್ನು ಪಡೆಯುತ್ತಿದ್ದು, ಆ ಶಾಲೆಗಳ ಮುಖ್ಯಸ್ಥರುಗಳು ಹಾಗು ಪೋಷಕರುಗಳು ಚಳವಳಿಯ ಬಗ್ಗೆ ಹೆಮ್ಮೆಪಡುತ್ತಿರುವುದು ಸಂತಸದ ವಿಷಯ.

ರಾಜ್ಯದ ಘಟಕಗಳ ಎಲ್ಲಾ ನಾಯಕ-ನಾಯಕಿಯರಲ್ಲಿ ನನ್ನ ಮನವಿ. ನೀವುಗಳು ಮುಂದಿನ ಎರಡು ಮೂರು ವರ್ಷಗಳಲ್ಲಿ ವೃಕ್ಷಮಣಿಧಾರಕರಾಗಲೇಬೇಕೆಂಬ ಉತ್ಕಟ ಆಸೆ-ಆಕಾಂಕ್ಷೆ ನನ್ನದು.

ಪ್ರತಿ ತಾಲ್ಲೂಕಿನಲ್ಲಿ ಕನಿಷ್ಠ 10 ಜನ ವೃಕ್ಷಮಣಿದಾರಿಗಳು. ಒಬ್ಬ ಎ.ಎಲ್.ಟಿ. ಸ್ಕೌಟ್ಸ್, ಒಬ್ಬ ಎ.ಎಲ್.ಟಿ. ಗೈಡ್ಸ್, ಒಬ್ಬರಾದರೂ ತರಬೇತಿ ನಾಯಕ-ನಾಯಕಿ ಇದ್ದಲ್ಲಿ ಚಳವಳಿಯ ತರಬೇತಿ ಹಾಗು ಕಾರ್ಯಕ್ರಮಗಳನ್ನು ಸುಲಲಿತವಾಗಿ ಜರುಗಿಸಲು ಸಾಧ್ಯವಾಗುತ್ತದೆ. ಜಿಲ್ಲೆಗಳ ತರಬೇತಿ ಆಯುಕ್ತರುಗಳು ಈ ಬಗ್ಗೆ ಮುತುವರ್ಜಿವಹಿಸಿ ಆಸಕ್ತ ಹಾಗು ಅರ್ಹ ಘಟಕಗಳ ನಾಯಕ-ನಾಯಕಿಯರನ್ನು ಗುರುತಿಸಿ ಹೆಚ್ಚಿನ ತರಬೇತಿ ಪಡೆಯಲು ಸೂಕ್ತ ಸಲಹೆ ಮಾರ್ಗದರ್ಶನಗಳನ್ನು ನೀಡಲು ಕಾರ್ಯಪ್ರವೃತ್ತರಾಗಬೇಕೆಂದು ಸೂಚಿಸುತ್ತೇನೆ.

**ಈ ಹಿಂದೆ ರಾಜ್ಯ ವಾರ್ತಾಪತ್ರದ ನನ್ನ ನುಡಿಗಳಲ್ಲಿ ಎಲ್ಲರ ಗಮನವನ್ನು ಸೆಳೆದಿರುವಂತೆ, ವರ್ಷದ ಮೊದಲ ಮೂರು-ನಾಲ್ಕು ತಿಂಗಳುಗಳಲ್ಲಿ "ಸ್ಕೌಟರ್ಸ್-ಗೈಡರ್ಸ್ ಸಮಾವೇಶ" - "ವೃಕ್ಷಮಣಿದಾರಿಗಳ ಸಭೆ", ಮೂಲ ತರಬೇತಿಗಳನ್ನು ಏರ್ಪಡಿಸುವುದು. ಸ್ಥಳೀಯ ಹಾಗು ಜಿಲ್ಲಾ ಮೇಳಗಳನ್ನು ಏರ್ಪಡಿಸುವುದು, ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು, ರಕ್ತದಾನ ಶಿಬಿರಗಳಲ್ಲಿ ಭಾಗವಹಿಸುವುದು, ಸಮಾಜ ಸೇವಾ ಶಿಬಿರಗಳನ್ನು ಹಾಗು ಪರಿಸರ ಜಾಗೃತಿ ಜಾಥಾ ಏರ್ಪಡಿಸುವುದು, ಪದಕ ತರಬೇತಿ, ಪೆಟ್ರೋಲ್ ಲೀಡರ್ಸ್, ಸಿಕ್ಸರ್ಸ್ ತರಬೇತಿ ಕಾರ್ಯಕ್ರಮಗಳು ಹಾಗು ರಾಜ್ಯ ಸಂಸ್ಥೆ ಏರ್ಪಡಿಸುವ ಹಲವಾರು ಕಾರ್ಯಕ್ರಮಗಳಲ್ಲಿ ಘಟಕಗಳ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಲು ಬೇಕಾಗುವ ಎಲ್ಲ ರೀತಿಯ ಸಹಾಯ-ಸಹಕಾರ-ಮಾರ್ಗದರ್ಶನ ಮಾಡುವುದು ನಮ್ಮಗಳೆಲ್ಲರ ಜವಾಬ್ದಾರಿ ಮತ್ತು ಕರ್ತವ್ಯ.**

2012-13ನೇ ವಾರ್ಷಿಕ ವರ್ಷಕ್ಕಿಂತಲೂ ಹೆಚ್ಚಿನ ಚಟುವಟಿಕೆಗಳು, ಶಿಬಿರಗಳು, ಮೇಳಗಳು ಹಾಗು ತರಬೇತಿಗಳನ್ನು 2013-14ರಲ್ಲಿ ರಾಜ್ಯದ ಎಲ್ಲಾ ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳು ಏರ್ಪಡಿಸುವರೆಂಬ ವಿಶ್ವಾಸ ನನಗಿದೆ. ಈ ದಿಸೆಯಲ್ಲಿ ರಾಜ್ಯ ಸಂಸ್ಥೆಯ ಸಂಘಟನೆ ಹಾಗು ತರಬೇತಿ ವಿಭಾಗಗಳ ಮುಖ್ಯಸ್ಥರುಗಳು ಹಾಗು ಜಿಲ್ಲಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಸಂಘಟನೆಗಳ-ತರಬೇತಿ ವಿಭಾಗಗಳ ಮುಖ್ಯಸ್ಥರು ಹಾಗು ಎಲ್ಲಾ ಹಂತದ ಪದಾಧಿಕಾರಿಗಳು ಸಕ್ರಿಯವಾಗಿ ಭಾಗವಹಿಸಿ, ನಾವುಗಳೇ ಒಪ್ಪಿ ಯೋಜಿಸಿರುವ ಕಾರ್ಯಚಟುವಟಿಕೆಗಳನ್ನು ಪ್ರಾಮಾಣಿಕವಾಗಿ ಯಶಸ್ವಿಗೊಳಿಸುವಲ್ಲಿ ದಯಾಮಯನಾದ ಭಗವಂತನ ಕೃಪಾಶೀರ್ವಾದಗಳು ಸದಾ ನಮ್ಮಗಳೆಲ್ಲರ ಮೇಲಿರಲೆಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

**ಕೊಂಡಜ್ಜಿ ಬ. ಷಣ್ಮುಖಪ್ಪ**

# ರಾಜ್ಯ ವಾರ್ತೆ.............

## ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪೂರ್ವ ಸಿದ್ಧತಾ ತರಬೇತಿ ಶಿಬಿರ

ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ಪೂರ್ವಸಿದ್ಧತಾ ತರಬೇತಿ ಶಿಬಿರವನ್ನು ದಿನಾಂಕ 18-04-2013 ರಿಂದ 22-04-2013ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಇಲ್ಲಿ ಸಂಘಟಿಸಲಾಯಿತು. 16 ಜಿಲ್ಲೆಗಳಿಂದ 155 ಸ್ಕೌಟ್ಸ್, 17 ಸ್ಕೌಟ್ ಶಿಕ್ಷಕರು, 165 ಗೈಡ್ಸ್, 18 ಗೈಡ್ಸ್ ಶಿಕ್ಷಕಿಯರು, ಹೀಗೆ ಒಟ್ಟು 355 ಮಂದಿ ಈ ಶಿಬಿರದಲ್ಲಿ ಭಾಗವಹಿಸಿರುತ್ತಾರೆ. ಸ್ಕೌಟ್ಸ್ ವಿಭಾಗದಲ್ಲಿ 12 ತರಬೇತಿದಾರರು ಹಾಗೂ ಗೈಡ್ ವಿಭಾಗದಲ್ಲಿ 12 ತರಬೇತುದಾರರು ಭಾಗವಹಿಸಿರುತ್ತಾರೆ.

ದಿನಾಂಕ 18-04-2013 ರಂದು ಪೂರ್ವಾಹ್ನ 8 ಗಂಟೆಗೆ ಉಪಹಾರದ ನಂತರ ದಾಖಲಾತಿಯೊಂದಿಗೆ ಶಿಬಿರವು ಪ್ರಾರಂಭವಾಯಿತು. ಶಿಬಿರದಲ್ಲಿ ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಸ್ಕೌಟ್ ವಿಭಾಗ ಹಾಗೂ ಶ್ರೀಮತಿ ಕೆ.ಕೆ. ಲೀಲಾ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ಗೈಡ್ ವಿಭಾಗ ಮೇಲ್ವಿಚಾರಕರಾಗಿ ಸಹಕರಿಸಿರುತ್ತಾರೆ. ಸ್ಕೌಟ್ ವಿಭಾಗದಲ್ಲಿ ಶ್ರೀ ಎಂ. ಪ್ರಭಾಕರ ಭಟ್, ಎಲ್.ಟಿ.(ಎಸ್), ಎ.ಎಸ್.ಓ.ಸಿ.(ಎಸ್), ನಾಯಕರಾಗಿ ಹಾಗೂ ಗೈಡ್ ವಿಭಾಗದಲ್ಲಿ ಶ್ರೀಮತಿ ಅರುಣಮಾಲ, ಎ.ಎಲ್.ಟಿ.(ಜಿ), ಶಿವಮೊಗ್ಗ, ನಾಯಕಿಯಾಗಿ ಕಾರ್ಯನಿರ್ವಹಿಸಿರುತ್ತಾರೆ.

ಶ್ರೀ ನೂರುಲ್ಲಾ, ಎ.ಎಸ್.ಓ.ಸಿ., ಎ.ಎಲ್.ಟಿ.(ಎಸ್) ಹಾಗೂ ಶ್ರೀ ಗೋಪಾಲಕೃಷ್ಣ, ಡಿ.ಓ., ಇವರುಗಳು ಊಟ ಉಪಹಾರದ ಮೇಲ್ವಿಚಾರಕರಾಗಿ ಕಾರ್ಯನಿರ್ವಹಿಸಿರುತ್ತಾರೆ.

18-04-2013 ರಂದು ಪೂರ್ವಾಹ್ನ 8-30, ದಾಖಲಾತಿ, ಸಮವಸ್ತ್ರ ಪರಿವೀಕ್ಷಣೆ ನಡೆಸಲಾಯಿತು. ಮಧ್ಯಾಹ್ನ 2-30ಕ್ಕೆ ಧ್ವಜ ವಂದನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಪ್ರವೇಶದಿಂದ ರಾಷ್ಟ್ರಪತಿ ಪದಕದವರೆಗಿನ ಎಲ್ಲಾ ವಿಷಯಗಳನ್ನು ಪ್ರಾಯೋಗಿಕವಾಗಿ ತಿಳಿಸಲಾಯಿತು.

ದಿನಾಂಕ 21-04-2013 ರಂದು ರಾತ್ರಿ ಶಿಬಿರಾಗ್ನಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು. 22-04-2013 ರಂದು ಬೆಳಗ್ಗೆ 7 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. ಸಂಜೆ 3-30ಕ್ಕೆ ಧ್ವಜ ಅವರೋಹಣದೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

**ವಿದ್ಯುತ್ ವಾಣಿ**

ನಮ್ಮ ರಾಷ್ಟ್ರೀಯ ಆದರ್ಶಗಳು ತ್ಯಾಗ ಮತ್ತು ಸೇವೆ.
ದೇಶವನ್ನು ಈ ಎರಡು ಆದರ್ಶಗಳಲ್ಲಿ ತೊಡಗಿಸಿದರೆ ಉಳಿದವೆಲ್ಲವೂ
ತಮಗೆ ತಾವೇ ಸರಿಹೋಗುತ್ತವೆ.

– ಸ್ವಾಮಿ ವಿವೇಕಾನಂದರು

## Report of the State Level Preparatory cum Pre-Testing Camp for Prospective Rashtrapathi Guides at State Training Centre, Dr. Annie Besant Prak, Doddaballapur, Bangalore Rural District from 18th to 22nd April 2013.

*The Scouts and Guides along with Unit Leaders of the following Districts have participated in the Camp. Districtwise participation and details of Staff Members are as follows :*

*After the Registration and Settling down, the Camp started with the Prayer and Flag, followed by Daily Routine, Camp Rules, Intergration Session and formation of Groups.*

| Leader of Scout Wing | Leader of the Guide Wing |
|---|---|
| *Sri A.M. Shankar, ASOC, Bangalore North* | *Smt A. Saroja, HWB(G), Koppal* |

| Sl. No. | Name of the District | No. of Scouts | No. of Scouters | No. Guides | No. of Guiders |
|---|---|---|---|---|---|
| 1. | Bangalore North | 47 | 6 | 44 | 3 |
| 2 | Bangalore South | 18 | 1 | 40 | 4 |
| 3 | Bangalore Rural | 1 | 1 | - | - |
| 4 | Gulbarga | 19 | 3 | 7 | 2 |
| 5 | Mysore | 16 | - | 18 | 1 |
| 6. | Ramanagara | 1 | - | 6 | 1 |
| 7. | Kolar | 25 | 3 | 6 | 1 |
| 8. | Raichur | 6 | - | 3 | 1 |
| 9 | Tumkur | 8 | - | 9 | - |
| | Total | 141 | 14 | 133 | 13 |
| | Staff Members | - | 7 | - | 8 |
| | Service Rangers | - | - | - | 2 |
| | Grand Total | 141 | 21 | 133 | 23 |

*3 bases were formed for Scouts and 4 Bases were formed for Guides. The subjects were dealt as per the APRO Part-II and Part-III Rashtrapathi requirements.*

*Grand Camp fire was conducted at 7-30 p.m. on 21st April 2013. The Camp fire was declared open by Smt S.K. Prabha, LT(G) & HQC(G) for Training. All Faith's Prayer was counducted 7-00 a.m. on 22nd April 2013. All the Scouts and Guides took active participation in the camp. All the Unit Leaders shared the reponsibility with Staff. Both the Leaders made the camp more effective and successful along with supporting Staff. After the final talk the flag was Lowered on 22nd April 2013 at 4-00 p.m.*

# TRAINING TEAM MEET

*The State Level Training Team Meet was Held at PORT BLAIR Andamans from 25th to 30th April 2013.*

*71 Trainers drawn from 28 districts of the State Participated in the Meet.*

*51 Trainers from Scout wing and 28 Trainers from Guide wing Participated. Mr. C.S. Reddy Hon STC(S) was the Leader of the meet was supported suproted by Mrs. Janaki Venugopal SOC(G) and Mrs. K.K. Leela STC(G).*

*The following Subjects were discussed at the Meet.*

*Fundamentals, Amendments to Rules, Amendments to Boy / Girl Programme. Amendments to scheme of Training, Renewal of Hon. Charge, B.P. Six. Duty Change, Kit Inspection, Patrol Meetings, Troop / Company / Pack flock meetings. Prime Minister's Shield Competition. Day to Day Programme for Cub / Scout / Bulbul. Guide Training Courses.*

*The Participants visited Cellular Jail, Ramakrishna Ashram and other places of the Islands Area. The meet was declared closed on 30th April 2013 at 9 a.m. after lowering the Flag. The following persons visited the Meet. Mr. Subramanyam, State Secretary Andaman and Nicobar Islands, Sri. Abhejananda Swamiji of Ramakrishna Ashram, Andamans.*

# ಜಿಲ್ಲಾ ವಾರ್ತೆಗಳು

## ದಾವಣಗೆರೆ

ದಿನಾಂಕ 12–4–2013 ರಂದು ಬೆಳಿಗ್ಗೆ 10–30ಕ್ಕೆ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ನೇತಾಜಿ ಸ್ಕೌಟ್ ಟ್ರೂಪ್ ಹಾಗೂ ಚೇತನ ಗೈಡ್ ಗ್ರೂಪ್ ವತಿಯಿಂದ ಮತದಾನ ಜಾಗೃತಿ ಆಂದೋಲನ ಕಾರ್ಯಕ್ರಮವನ್ನು ಡಿ.ಆರ್.ಎಂ. ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಹಾಗೂ ಉದ್ಘಾಟಕರಾಗಿ ಮಾನ್ಯ ಶ್ರೀ ಎಸ್.ಎಸ್. ಪಟ್ಟಣಶೆಟ್ಟಿ, ಜಿಲ್ಲಾಧಿಕಾರಿಗಳು ಆಗಮಿಸಿದ್ದು "ಪ್ರಜ್ಞಾವಂತಿಕೆಯಿಂದ ಮತಚಲಾಯಿಸಿ ಇತರರಿಗೂ ಮತ ಹಾಕುವಂತೆ ಪ್ರೇರೇಪಿಸಿ" ಎಂಬ ಕರಪತ್ರವನ್ನು ಬಿಡುಗಡೆ ಮಾಡಿದರು. ಹಾಗೂ ಮತದಾನದ ಬಗ್ಗೆಯೂ ಉಪೇಕ್ಷೆ ಮಾಡದೇ ತಮ್ಮ ಹಕ್ಕನ್ನು ಚಲಾಯಿಸಬೇಕು ಎಂದು ಹೇಳಿದರು.

ಜಿಲ್ಲಾ ಸ್ಕೌಟ್ ಗೈಡ್ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಎಸ್.ಹೆಚ್. ಪಟೇಲ್ ಅತಿಥಿಗಳಾಗಿ ಮಾತನಾಡುತ್ತಾ ಹಣ ಹೆಂಡಕ್ಕೆ ಮಾರು ಹೋಗಬಾರದು. ಮತದಾನದ ಮೂಲಕ ಯೋಗ್ಯ ವ್ಯಕ್ತಿಯನ್ನು ಆಯ್ಕೆ ಮಾಡಬೇಕು ಎಂದು ತಿಳಿಸಿದರು. ಅತಿಥಿಗಳಾಗಿ ಶ್ರೀ ಡಿ.ಕೆ. ಶಿವಕುಮಾರ್ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಉಪಸ್ಥಿತರಿದ್ದರು.

ನಂತರ ಜಿಲ್ಲಾ ಮುಖ್ಯ ಆಯುಕ್ತರು, ಸ್ಕೌಟ್ ಆಯುಕ್ತರು, ಎಲ್ಲಾ ಜಿಲ್ಲಾ ಪದಾಧಿಕಾರಿಗಳು ಸ್ಕೌಟರ್ಸ್, ಗೈಡರ್ಸ್ ಹಾಗೂ ಮಕ್ಕಳು ಜಿಲ್ಲಾ ಸಂಸ್ಥೆಯಿಂದ ಜಯದೇವ ವೃತ್ತದವರೆಗೆ ಜಾಥಾ ತೆರಳಿ ಮಾನವ ಸರಪಳಿ ರಚಿಸಿ ಕರಪತ್ರ ಹಂಚುವುದಲ್ಲದೆ ಮತದಾನ ಮಾಡುವಂತೆ ಅರಿವು ಮೂಡಿಸಿದರು.

ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಆಯುಕ್ತರು (ಸ್ಕೌಟ್) ಸ್ವಾಗತಿಸಿದರು. ಪ್ರಾಸ್ತಾವಿಕ ನುಡಿಯನ್ನು ಶ್ರೀ ಜೆ.ಎಸ್. ವಿಜಯ ಹಾಗೂ ವಂದನಾರ್ಪಣೆಯನ್ನು ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಗೈಡ್ ಆಯುಕ್ತರು ನೆರವೇರಿಸಿದರು. ಶ್ರೀಮತಿ ಶಶಿಕಲಾ, ಕಾರ್ಯದರ್ಶಿ ನಿರೂಪಣೆ ಮಾಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಖಜಾಂಚಿಗಳು ಶ್ರೀ ಬೂಸ್ನೂರು ವಿಶ್ವನಾಥ್, ಹಾಗೂ ಎಲ್ಲಾ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು. ಕಾರ್ಯಕ್ರಮದಲ್ಲಿ ಸುಮಾರು 150 ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್‌ಗಳು ಭಾಗವಹಿಸಿದ್ದರು.

## ಹಾಸನ

### ಹಾಸನ ಸರ್ಕಾರಿ ವಿಜ್ಞಾನ ಕಾಲೇಜಿನ ವತಿಯಿಂದ ರೋವರ್ಸ್ – ರೇಂಜರ್ಸ್ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸ್ಕೌಟ್ಸ್–ಗೈಡ್ ಸಮುದಾಯ ಭವನದ ಆವರಣದಲ್ಲಿ ದಿನಾಂಕ 23–3–2013ರಂದು ಹೊಯ್ಸಳ ರೋವರ್ ಕ್ರ್ಯೂ ಮತ್ತು ರೇಂಜರ್ಸ್ ಘಟಕ, ಸರ್ಕಾರಿ ವಿಜ್ಞಾನ ಕಾಲೇಜು ವತಿಯಿಂದ ಪ್ರೊ. ಎನ್.ಎಚ್. ಗಂಗೇಗೌಡ ಮತ್ತು ಪ್ರೊ. ಕೆ. ಲತಾ ವಾರ್ಷಿಕ ಶಿಬಿರವನ್ನು ಏರ್ಪಡಿಸಿದ್ದರು.

ಈ ಕಾರ್ಯಕ್ರಮವನ್ನು ಕಾಲೇಜಿನ ಪ್ರಾಂಶುಪಾಲರಾದ ಡಾ. ಎ.ಎಲ್. ಮುರಳೀಧರ್, ಇವರು ಜ್ಯೋತಿ ಬೆಳಗುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ವಿವಿಧ ಚಟುವಟಿಕೆಗಳಿಂದ ಯುವಕ-ಯುವತಿಯರು ಉತ್ತಮ ಕೌಶಲ, ದೇಶಭಕ್ತಿ, ದೈವಭಕ್ತಿ, ಸೇವಾ ಭಾವನೆ ಹಾಗೂ ಸಮಾಜ ಸೇವೆ ಮುಂತಾದ ಮೌಲ್ಯಗಳನ್ನು ಬೆಳೆಸಿಕೊಂಡು ಮಾದರಿ ಪ್ರಜೆಗಳಾಗುವರು ಎಂದು ತಿಳಿಸಿದರು.

ಶ್ರೀಮತಿ ಕಾಂಚನಮಾಲಾ ಡಿ.ಟಿ.ಸಿ. (ಗೈಡ್ಸ್) ಹಾಗೂ ಎಲ್.ಟಿ. ಲೋಕೇಶ್ ಎ.ಎಸ್.ಓ.ಸಿ.ರವರು ಶಿಬಿರದಲ್ಲಿ ಉಪಸ್ಥಿತರಿದ್ದು ರೋವರ್ಸ್-ರೇಂಜರ್ಸ್‌ಗಳಿಗೆ ಪ್ರವೇಶದ ಅವಶ್ಯಕತೆಗಳ ಬಗ್ಗೆ ಹಾಗೂ ರೋವರ್‌ಗಳ ಕಾರ್ಯ ಚಟುವಟಿಕೆಗಳ ಕುರಿತು ಮಾಹಿತಿ ಹಾಗೂ ತರಬೇತಿ ನೀಡಿದರು.

## ರೋವರ್ಸ್ ಸ್ಕೌಟ್ ಲೀಡರ್ಸ್-ರೇಂಜರ್ ಲೀಡರ್ಸ್‌ಗಳಿಗೆ ಒಂದು ದಿನದ ಪುನಃಶ್ಚೇತನ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ದಿನಾಂಕ 6-4-2013ರಂದು ಹಾಸನ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಮುದಾಯ ಭವನದಲ್ಲಿ ಒಂದು ದಿನದ ಕಾರ್ಯಾಗಾರವನ್ನು ರೋವರ್ ಸ್ಕೌಟ್ ಲೀಡರುಗಳಿಗೆ, ರೇಂಜರ್ ಲೀಡರುಗಳಿಗೆ ಮತ್ತು ಕಾಲೇಜು ಉಪನ್ಯಾಸಕರುಗಳಿಗೆ ಹಮ್ಮಿಕೊಳ್ಳಲಾಗಿತ್ತು.

ಶಿಬಿರದ ಉದ್ಘಾಟನೆಯನ್ನು ಶ್ರೀ ನರೇಂದ್ರಕುಮಾರ್ ಎ.ಎಲ್.ಟಿ.(ರೋವರ್)ರವರು ಜ್ಯೋತಿ ಬೆಳಗುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತಾ ಹಾಸನ ಜಿಲ್ಲೆಯ ರೋವರ್ಸ್-ರೇಂಜರ್ಸ್ ಘಟಕಗಳು ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಳೆದ ವರ್ಷದಿಂದ ಕಾರ್ಯನಿರ್ವಹಿಸುತ್ತಿರುವುದು ಉತ್ತಮ ಬೆಳವಣಿಗೆಯಾಗಿದೆ ಎಂದು ತಿಳಿಸಿ ಕಾರ್ಯಾಗಾರದಲ್ಲಿ ರೋವರ್ಸ್ ಸ್ಕೌಟ್ ಲೀಡರ್ಸ್ - ರೇಂಜರ್ಸ್ ಲೀಡರ್ಸ್‌ಗಳ ಜವಾಬ್ದಾರಿ ಮತ್ತು ಕರ್ತವ್ಯಗಳ ಕುರಿತು ತಿಳಿಸಿದರು. ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು (ಸ್ಕೌಟ್) ಮಾತನಾಡಿ ರೋವರ್-ರೇಂಜರ್ ಚಟುವಟಿಕೆಗಳು ಹಾಸನ ಜಿಲ್ಲೆಯಲ್ಲಿ ವಿವಿಧ ಕಾಲೇಜುಗಳಲ್ಲಿ ಕ್ರಿಯಾತ್ಮಕವಾಗಿ ನಡೆಯಲು ಮತ್ತು ಯುವಕ-ಯುವತಿಯರಿಗೆ ಈ ಚಟುವಟಿಕೆಗಳ ಬಗ್ಗೆ ಅರಿವು ಮೂಡಿಸುವುದು ಕಾಲೇಜು ಉಪನ್ಯಾಸಕರ ರೋವರ್ ಲೀಡರ್‌ಗಳ ಹಾಗೂ ರೇಂಜರ್ ಲೀಡರ್‌ಗಳ ಕರ್ತವ್ಯವಾಗಿದ್ದು ಈ ದಿಶೆಯಲ್ಲಿ ಎಲ್ಲಾ ಉಪನ್ಯಾಸಕ ಮೂಲ ಉಪನ್ಯಾಸಕಿಯರು ರೋವರ್-ರೇಂಜರ್ ತರಬೇತಿ ಪಡೆದು ಕಾಲೇಜುಗಳಲ್ಲಿ ರೋವರ್-ರೇಂಜರ್ ಶಿಕ್ಷಣವನ್ನು ಕ್ರಿಯಾತ್ಮಕವಾಗಿ ನೀಡುವಂತೆ ಕರೆ ನೀಡಿದರು. ಜಿಲ್ಲಾ ಸಂಸ್ಥೆಯ ವತಿಯಿಂದ ಅಗತ್ಯ ಸಹಕಾರ ನೀಡುವುದಾಗಿ ಸಹಾ ತಿಳಿಸಿದರು.

ಶ್ರೀಯುತರುಗಳಾದ ಮುತ್ತೇಗೌಡರು, ಕಾರ್ಯದರ್ಶಿ, ಶ್ರೀ ಎಲ್.ಟಿ. ಲೋಕೇಶ್ ಎ.ಎಸ್.ಓ.ಸಿ., ಶ್ರೀ ನರೇಂದ್ರಕುಮಾರ್, ಶ್ರೀಮತಿ ಕಾಂಚನಮಾಲಾ ಡಿ.ಟಿ.ಸಿ. ರೋವರ್-ರೇಂಜರ್‌ಗಳಿಗೆ ಅಗತ್ಯವಾದ ವಿವಿಧ ವಿಷಯಗಳನ್ನು ಕುರಿತು ತರಬೇತಿ ನೀಡಿದರು.

## ಸರ್ಕಾರಿ ಪ್ರಥಮದರ್ಜೆ ಕಾಲೇಜು ಹಾಗೂ ಶ್ರೀ ಆದಿಚುಂಚನಗಿರಿ ಪ್ರಥಮದರ್ಜೆ ಕಾಲೇಜುಗಳ ರೋವರ್ಸ್-ರೇಂಜರ್ಸ್‌ಗಳ ವಾರ್ಷಿಕ ಶಿಬಿರ, ಚನ್ನರಾಯಣಪಟ್ಟಣ

ಚನ್ನರಾಯಪಟ್ಟಣದ ಸರ್ಕಾರಿ ಪ್ರಥಮದರ್ಜೆ ಕಾಲೇಜು ಮತ್ತು ಶ್ರೀ ಆದಿಚುಂಚನಗಿರಿ ಪ್ರಥಮದರ್ಜೆ ಕಾಲೇಜುಗಳ ಸಂಯುಕ್ತ ಆಶ್ರಯದಲ್ಲಿ ದಿನಾಂಕ 7-4-2013 ರಿಂದ 9-4-2013ರ ವರೆಗೆ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ವಾರ್ಷಿಕ ಶಿಬಿರವನ್ನು ಏರ್ಪಡಿಸಲಾಗಿತ್ತು.

ಶಿಬಿರದ ಉದ್ಘಾಟನೆಯನ್ನು ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಉಮಾನಾಥ್ ರವರು ಜ್ಯೋತಿ ಬೆಳಗುವುದರ ಮೂಲಕ ನೆರವೇರಿಸಿ ಮಾತನಾಡುತ್ತಾ ರೋವರ್ ಮತ್ತು ರೇಂಜರ್ ಘಟಕಗಳು ನಮ್ಮ ಕಾಲೇಜಿನಲ್ಲಿ ಪ್ರಾರಂಭವಾಗಿ ಇದೇ ಪ್ರಥಮವಾಗಿ ಪ್ರವೇಶದಿಂದ ಪ್ರವೀಣ್ ಹಂತದವರೆಗೆ ತರಬೇತಿ ಕಾರ್ಯಗಾರವನ್ನು ಹಮ್ಮಿಕೊಳ್ಳಲಾಗಿದೆ ರೋವರ್ಸ್-ರೇಂಜರ್ಸ್‌ಗಳು ಈ ಶಿಬಿರದ ಮೂಲಕ ಸಮಾಜದ ಅಭಿವೃದ್ಧಿಗಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಮಾಜ ಸೇವೆಗೆ ಬದ್ಧರಾಗಲು ಅನುಕೂಲವಾಗುವುದಾಗಿ ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪ ರವರು ಸಮಾರಂಭದಲ್ಲಿ ಉಪಸ್ಥಿತರಿದ್ದು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಹಿರಿಯರ ವಿಭಾಗವಾದ ರೋವರ್ಸ್-ರೇಂಜರ್ಸ್‌ಗಳು ಜಿಲ್ಲೆಯಲ್ಲಿ ಹೆಚ್ಚು ಕ್ರಿಯಾತ್ಮಕವಾಗಿ ಬೆಳೆಯುತ್ತಿರುವುದು ಪ್ರಶಂಸನೀಯವಾದುದು ಎಂದು ತಿಳಿಸಿದರು.

ಶ್ರೀ ಜಯರಾಂ ಪತ್ರಕರ್ತರು ಚನ್ನರಾಯಪಟ್ಟಣ ಮತ್ತು ಶ್ರೀ ಕೆ. ಭರತ್ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಚನ್ನರಾಯಪಟ್ಟಣ ಇವರು ಉಪಸ್ಥಿತರಿದ್ದು ರೋವರ್ಸ್-ರೇಂಜರ್ಸ್‌ಗಳ ಸೇವೆಯನ್ನು ಸಮಾಜದ ಅಭಿವೃದ್ಧಿಗಾಗಿ ಮುಡಿಪಾಗಿಡುವಂತೆ ತಿಳಿಸಿದರು.

ಶ್ರೀ ನರೇಂದ್ರಕುಮಾರ್ ಎ.ಎಲ್.ಟಿ. ರೋವರ್ ಇವರು ಶಿಬಿರದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಆಗಮಿಸಿದ್ದರು. ಇವರು ರೋವರ್-ರೇಂಜರ್‌ಗಳ ವಿವಿಧ ವಿಷಯಗಳನ್ನು ಕುರಿತು ತರಬೇತಿ ನೀಡಿದರು.

ದಿನಾಂಕ 8-4-2013 ರಂದು ಬೆಳಿಗ್ಗೆ 6-30ಕ್ಕೆ ಸಂಸ್ಥೆಯ ಉಪಾಧ್ಯಕ್ಷರು ಮತ್ತು ಯೋಗ ಶಿಕ್ಷಕರು ಆದ ಶ್ರೀ ಸುರೇಶ್ ಗುರೂಜಿರವರು ಯೋಗ ಧ್ಯಾನ ಮತ್ತು ಪ್ರಾಣಾಯಾಮದ ಬಗ್ಗೆ ಪ್ರಾತ್ಯಕ್ಷಿಕೆ ನೀಡಿದರು. ಸಂಜೆ 7-30ಕ್ಕೆ ಶಿಬಿರಾಗ್ನಿ ಕಾರ್ಯಕ್ರಮ ಸಹಾ ಏರ್ಪಡಿಸಲಾಗಿತ್ತು. ಶ್ರೀ ಎಂ.ಕೆ. ಉಮಾನಾಥ್ ಪ್ರಾಂಶುಪಾಲರು ಶಿಬಿರಾಗ್ನಿ ಉದ್ಘಾಟಿಸಿದರು. ಶ್ರೀ ಬಸವರಾಜ್ ಪ್ರಾಧ್ಯಾಪಕರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು.

ದಿನಾಂಕ 9-4-2013ರಂದು ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಮುತ್ತೇಗೌಡ, ಜಿಲ್ಲಾ ಕಾರ್ಯದರ್ಶಿರವರು ವಹಿಸಿ ಮಾತನಾಡುತ್ತಾ ರೋವರ್ಸ್ ಮತ್ತು ರೇಂಜರ್ಸ್‌ಗಳ ಧ್ಯೇಯವಾಕ್ಯ ಸೇವೆ. ಸೇವೆಯಲ್ಲಿ ಅನೇಕ ವಿಧಗಳಿದ್ದು, ಮಾನವ ಜನ್ಮ ತಾಳಿದ ನಂತರ ಸಮಾಜಕ್ಕೆ ಏನಾದರೂ ಒಂದು ಕೊಡುಗೆ ನೀಡಬೇಕು ಎಂದು ತಿಳಿಸಿದರು.

ಶಿಬಿರದಲ್ಲಿ ಶ್ರೀಮತಿ ಕಾಂಚನಮಾಲಾ ಡಿ.ಟಿ.ಸಿ., ಶ್ರೀ ಎಲ್.ಟಿ. ಲೋಕೇಶ್, ಎ.ಎಸ್.ಓ.ಸಿ., ಶ್ರೀ ಎಂ.ಎಸ್. ಪ್ರಕಾಶ್, ಡಿ.ಟಿ.ಸಿ. ಮುಂತಾದವರು ಶಿಬಿರದ ಸಿಬ್ಬಂದಿ ಆಗಿ ಕಾರ್ಯನಿರ್ವಹಿಸಿದರು. ಆದಿಚುಂಚನಗಿರಿ ಪ್ರಥಮ ದರ್ಜೆ ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಡಾ. ಎನ್. ಶಂಕರೇಶ್, ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಶ್ರೀ ಬೋರೇಗೌಡ, ರೇಂಜರ್ ಲೀಡರ್ ರಶ್ಮಿ, ಕಾರ್ಯಕ್ರಮ ವ್ಯವಸ್ಥೆ ಮಾಡಿ ಶಿಬಿರವನ್ನು ನಡೆಸಿಕೊಟ್ಟರು.

☆ ☆ ☆ ☆ ☆ ☆ ☆ ☆ ☆

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚನ್ನರಾಯಪಟ್ಟಣ ಮತ್ತು ಶ್ರವಣ ಬೆಳಗೊಳ ಸ್ಥಳೀಯ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್‌ಗಳ ದ್ವಿತೀಯ ಸೋಪಾನ ತರಬೇತಿಯನ್ನು ದಿನಾಂಕ 15-4-2013 ರಿಂದ 16-4-2013ರಂದು ಜುಟ್ಟನಹಳ್ಳಿ ಬೋರೆ ಸರ್ಕಾರಿ ಪ್ರೌಢ ಶಾಲೆಯ ಆವರಣದಲ್ಲಿ ಏರ್ಪಡಿಸಲಾಗಿತ್ತು.

ಶಿಬಿರದ ಉದ್ಘಾಟನೆಯನ್ನು ಶ್ರವಣಬೆಳಗೊಳ ಸ್ಥಳೀಯ ಸಂಸ್ಥೆಯ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀಯುತ ಪ್ರೇಮ್‌ಸೀನ್‌ರವರು ನೇರವೇರಿಸಿಧರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ರಾಮಸ್ವಾಮಿ, ಶ್ರವಣಬೆಳಗೊಳ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ವಹಿಸಿ ಶಿಬಿರಕ್ಕೆ ಯಶಸ್ಸನ್ನು ಕೋರಿದರು. ಶ್ರೀ ಕೆ. ಭರತ್ ಕಾರ್ಯಕ್ರಮ ನಿರೂಪಿಸಿದರು. ಮತ್ತು ಶಿಬಿರದ ನಾಯಕತ್ವವನ್ನು ವಹಿಸಿದ್ದರು. ಒಟ್ಟು 48 ಸ್ಕೌಟ್ಸ್, 40 ಗೈಡ್ಸ್‌ಗಳು 8 ಶಿಬಿರದ ಸಿಬ್ಬಂದಿ ಶಿಬಿರದಲ್ಲಿ ಭಾಗವಹಿಸಿದ್ದರು.

ದಿನಾಂಕ 16-4-2013ರಂದು ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಸೋಮನಾಥ್, ಸಹಾಯಕ ಜಿಲ್ಲಾ ಆಯುಕ್ತರು ವಹಿಸಿದ್ದರು. ಶ್ರೀ ಹೆಚ್.ಎಂ. ಗೌಡಯ್ಯ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು, ಮುಖ್ಯ ಅತಿಥಿಯಾಗಿ ಉಪಸ್ಥಿತರಿದ್ದರು. ಶ್ರೀ ಜಗದೀಶ್, ಖಜಾಂಚಿ ಸ್ಕೌಟ್ಸ್-ಗೈಡ್ಸ್‌ಗಳ ಚಟುವಟಿಕೆಗಳನ್ನು ಪ್ರಶಂಸಿಸಿದರು. ರಾಮಸ್ವಾಮಿ ಸ್ವಾಗತಿಸಿ, ಶ್ರೀ ಬಸವರಾಜ್ ಸ್ಕೌಟ್ ಮಾಸ್ಟರ್ ವಂದಿಸಿದರು.

## ಬೆಳಗಾಂ

ಬೆಳಗಾಂ ಜಿಲ್ಲೆಯ ಶ್ರೀಮತಿ ಐ.ಎಸ್. ಮಾದವಾಡ ಸರ್ಕಾರಿ ಪ್ರಥಮದರ್ಜೆ ಕಾಲೇಜು ರಾಮದುರ್ಗ ದಲ್ಲಿ ರೋವರ್, ರೇಂಜರ್ ಘಟಕಗಳ ಉದ್ಘಾಟನೆ ನಡೆಯಿತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಡಿ.ಬಿ. ಅತ್ತಾರ, ಜಿಲ್ಲಾ ಭಾರತ್ ಸ್ಕೌಟ್ ಮತ್ತು ಗೈಡ್‌ನ ಸಂಘಟಕರು ಬೆಳಗಾವಿ ಇವರು ಆಗಮಿಸಿ, ಸ್ಕೌಟ್ ಮತ್ತು ಗೈಡ್ಸ್‌ನ ಉಗಮ, ಅದು ಬೆಳೆದು ಬಂದ ರೀತಿ ಅದರ ವಿವಿಧ ಹಂತಗಳು ಮತ್ತು ಅದರ ಅವಶ್ಯಕತೆಯನ್ನು ಕುರಿತು ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರು. ಇನ್ನೋರ್ವ ಅತಿಥಿಗಳಾದ ಆರ್.ಎಸ್. ವಾಸನ್ ತಾಲ್ಲೂಕು ದೈಹಿಕ ಶಿಕ್ಷಣ ಅಧಿಕಾರಿ ಇವರು ಮಾತನಾಡಿ ವಿದ್ಯಾರ್ಥಿಗಳು ಜೀವನದಲ್ಲಿ ಹೇಗೆ ಗುರಿ ಮತ್ತು ತತ್ವಗಳನ್ನು ಅಳವಡಿಸಿಕೊಳ್ಳಬೇಕು ಮತ್ತು ಸ್ಕೌಟ್ ಮತ್ತು ಗೈಡ್ಸ್‌ನಿಂದ ಆಗುವ ಪ್ರಯೋಜನಗಳ ಕುರಿತು ತಿಳಿಸಿದರು.

ಕಾರ್ಯಕ್ರಮದಲ್ಲಿ ಅಧ್ಯಕ್ಷತೆ ವಹಿಸಿ ಮಾತನಾಡಿದ ಪ್ರಭಾರಿ ಪ್ರಾಚಾರ್ಯರಾದ ಡಾ. ಎಚ್.ಬಿ. ಮಹಾಂತೇಶ ಅವರು ಸ್ಕೌಟ್ ಮತ್ತು ಗೈಡ್ಸ್‌ದ ಪ್ರಾಮುಖ್ಯತೆಯನ್ನು ತಿಳಿಸಿಕೊಡುವುದರೊಂದಿಗೆ ವಿದ್ಯಾರ್ಥಿಗಳಲ್ಲಿ ದೇಶ ಪ್ರೇಮ, ಪರಿಸರ ಪ್ರಜ್ಞೆ ಮತ್ತು ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ ಪ್ರೇರಣೆ ನೀಡಿದರು. ರೋವರ್ ನಾಯಕರಾದ ಪ್ರೊ॥ ಕೆ.ಎ. ಸಾರವಾನ ಸ್ವಾಗತ ಮತ್ತು ಅತಿಥಿಗಳ ಪರಿಚಯ ಮಾಡಿದರು. ರೇಂಜರ್ ನಾಯಕಿಯಾದ ಪ್ರೊ॥ ಎ.ಪಿ. ಕಣವಿ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಎಲ್ಲಾ ವಿಭಾಗದ ಪ್ರಾಧ್ಯಾಪಕರು ಮತ್ತು ಎಲ್ಲಾ ವಿಭಾಗದ ವಿದ್ಯಾರ್ಥಿಗಳು ಉಪಸ್ಥಿತರಿದ್ದರು. ಕುಮಾರ ಅನಿಲ ಅಕಲಗಿ ಕಾರ್ಯಕ್ರಮ ನಿರೂಪಿಸಿದರು.

## ಬೀದರ್

ದಿನಾಂಕ 14-4-2013 ರಂದು ಡಾ. ಅಂಬೇಡ್ಕರ್‌ರವರ ಜಯಂತಿಯನ್ನು ಆಚರಿಸಲಾಯಿತು. ಡಿ.ಡಿ.ಪಿ.ಐ. ಕಛೇರಿಯಲ್ಲಿ ಡಾ. ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿದ ಮಾನ್ಯ ಉಪನಿರ್ದೇಶಕರಾದ ಶ್ರೀ ಹೆಚ್.ಆರ್. ಬಸಪ್ಪರವರು ಡಾ॥ ಅಂಬೇಡ್ಕರ್‌ರವರ ಜೀವನ ಶೈಲಿ ಹಾಗು ಅವರು ನಡೆದು ಬಂದ ಹಾದಿಯನ್ನು ವಿವರಿಸಿ ಹೇಳಿದರು. ನಂತರ ಡಿ.ಸಿ. ಕಛೇರಿಯ ವರೆಗೆ ಮೆರವಣಿಗೆಯನ್ನು ನಡೆಸಲಾಯಿತು.



ದಿನಾಂಕ 23-4-2013 ರಂದು ಮಹಾವೀರ ಜಯಂತಿಯನ್ನು ಆಚರಿಸಲಾಯಿತು. ಜೈನ್ ಮಂದಿರದಿಂದ ಹೊರಟ ಮೆರವಣಿಗೆಯಲ್ಲಿ ಗುರುನಾನಕ್ ಪಬ್ಲಿಕ್ ಶಾಲೆಯ ಸ್ಕೌಟ್ಸ್ ಮಕ್ಕಳೊಂದಿಗೆ ಭಾಗವಹಿಸಿ ಸೇವೆಯನ್ನು ಸಲ್ಲಿಸಲಾಯಿತು. ಇದರ ನೇತೃತ್ವವನ್ನು ಶ್ರೀ ಎ.ಎಸ್. ಶಿವಕುಮಾರ್ ಎ.ಎಸ್.ಓ.ಸಿ.(ಎಸ್) ವಹಿಸಿದ್ದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 25-4-2013 ರಂದು ಹನುಮ ಜಯಂತಿ ಅಂಗವಾಗಿ ಚಿದ್ರಿ ರಸ್ತೆಯಲ್ಲಿರುವ ಹನುಮಾನ್ ಮಂದಿರದಲ್ಲಿ ಶ್ರೀ ಐ.ಎಸ್. ಕಲ್ಮನಿ ಸ್ಕೌಟ್ ಮಾಸ್ಟರ್ ಹಾಗು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮೀನಕೇರಾದ ಸ್ಕೌಟ್ಸ್ ಮಕ್ಕಳಿಂದ ಸೇವೆಯನ್ನು ಮಾಡಲಾಯಿತು. ಶ್ರೀ ಎ.ಎಸ್. ಶಿವಕುಮಾರ್ ಎ.ಎಸ್.ಓ.ಸಿ.ರವರು ಭಾಗವಹಿಸಿದ್ದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 26-4-2013 ರಂದು ಒಂದು ದಿನ ಹಾಡುಗಾರಿಕೆ ಶಿಬಿರವನ್ನು ಗುರುನಾನಕ್ ಪಬ್ಲಿಕ್ ಶಾಲೆಯ ಮಕ್ಕಳಿಂದ ಗುರುನಾನಕ್ ಮಂದಿರದಲ್ಲಿ ನಡೆಸಲಾಯಿತು. ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಹಾಡುಗಳನ್ನು ಹೇಗೆ ಹಾಡಬೇಕು. ಹಾಗು ವೇದಿಕೆಯ ಮೇಲೆ ಯಾವ ರೀತಿ ಧೈರ್ಯದಿಂದ ಹಾಡಬೇಕು ಎಂಬುದನ್ನು ತಿಳಿಸಲಾಯಿತು. ಇದರ ನಾಯಕತ್ವವನ್ನು ಎ.ಎಸ್.ಓ.ಸಿ. ಶ್ರೀ ಎ.ಎಸ್. ಶಿವಕುಮಾರ್ ವಹಿಸಿದ್ದರು. ಈ ಶಿಬಿರದಲ್ಲಿ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್, ಸ್ಕೌಟ್ಸ್-ಗೈಡ್ಸ್ ಮಕ್ಕಳು ಶಾಲೆಯ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 28-4-2013 ರಿಂದ 29-4-2013ರ ವರೆಗೆ ಚಿತ್ರಕಲಾ ಹಾಗು ನೃತ್ಯ ಶಿಬಿರವನ್ನು ಗುರುನಾನಕ್ ಪಬ್ಲಿಕ್ ಶಾಲೆ ಬೀದರ್‌ನಲ್ಲಿ ನಡೆಸಲಾಯಿತು. ಗುರುನಾನಕ್ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್ ಮಕ್ಕಳಿಂದ ಎರಡು ದಿನಗಳ ಚಿತ್ರಕಲಾ ಹಾಗು ನೃತ್ಯ ಶಿಬಿರವನ್ನು ನಡೆಸಲಾಯಿತು. ಚಿತ್ರಕಲೆಗೆ ಶ್ರೀ ರಾಜುಪ್ರಕಾಶ್ ಸ್ಕೌಟ್ ಮಾಸ್ಟರ್ ಹಾಗು ಡ್ಯಾನ್ಸ್‌ಗೆ ಶ್ರೀ ದತ್ತಾತ್ರೇಯರವರುಗಳು ಬೋಧನೆಯನ್ನು ಮಾಡಿದರು. ಈ ಶಿಬಿರದಲ್ಲಿ ಸ್ಕೌಟ್ ಮಾಸ್ಟರ್‌ರ ಶ್ರೀ ಮಲ್ಲಿಕಾರ್ಜುನ ಹಿರೇಮಠ, ಗೈಡ್ ಕ್ಯಾಪ್ಟನ್ ಶ್ರೀಮತಿ ಶೀಲಾ ಕುಲಕರ್ಣಿ ಭಾಗವಹಿಸಿದ್ದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 28-4-2013 ರಂದು ಕರ್ನಾಟಕ ಪಶುವೈದ್ಯಕೀಯ ದಿನಾಚರಣೆ ಪ್ರಯುಕ್ತ ನಾಯಿಗಳಿಗೆ ರೇಬಿಸ್ ಲಸಿಕೆಗಳನ್ನು ಹಾಕಿಸುವ ಕಾರ್ಯಕ್ರಮದಲ್ಲಿ ಭಾಗವಹಿಸಲಾಯಿತು. ಮನೆ-ಮನೆಗೆ ತೆರಳಿ ಮೂರು ವರ್ಷದೊಳಗಿನ ನಾಯಿ ಮರಿಗಳಿಗೆ ಲಸಿಕೆಗಳನ್ನು ಹಾಕಿಸಲು ಸೇವೆಯನ್ನು ಮಾಡಲಾಯಿತು. ಇದರಲ್ಲಿ ಶ್ರೀ ರಾಚಯ್ಯ, ಸ.ಶಿ. ಸ್ಥಳೀಯ ಸಂಸ್ಥೆ ಕಾರ್ಯದರ್ಶಿರವರೂ ಸಹ ಭಾಗವಹಿಸಿದ್ದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 1-5-2013 ರಂದು ಕಾರ್ಮಿಕ ದಿನಾಚರಣೆಯನ್ನು ಆಚರಿಸಲಾಯಿತು. ರೋಟರಿ ಕ್ಲಬ್‌ನಿಂದ ಹೊರಟ ಕಾರ್ಮಿಕ ಸಂಘದ ಮೆರವಣಿಗೆಯಲ್ಲಿ ಯೂನಿಕ್ ಪಬ್ಲಿಕ್ ಶಾಲೆಯ ಸ್ಕೌಟ್ಸ್ ಮಕ್ಕಳು ಹಾಗು ಸ್ಕೌಟ್ ಮಾಸ್ಟರ್ ಶ್ರೀ ಐ.ಎಸ್. ಕಲ್ಮನಿರವರುಗಳೊಂದಿಗೆ ಭಾಗವಹಿಸಿದ್ದರು.

☆ ☆ ☆ ☆ ☆ ☆ ☆ ☆ ☆

ಯೂನಿಕ್ ಪಬ್ಲಿಕ್ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಪ್ರವೇಶದಿಂದ ತೃತೀಯ ಸೋಪಾನದ ವರೆಗೆ ರಸಪ್ರಶ್ನೆ ಸ್ಪರ್ಧೆಯನ್ನು ನಡೆಸಲಾಯಿತು.

ಮುಖ್ಯ ಅತಿಥಿಗಳಾಗಿ ಯೂನಿಕ್ ಪಬ್ಲಿಕ್ ಶಾಲೆಯ ಮುಖ್ಯ ಗುರುಗಳು ಆಗಮಿಸಿ ಮಾತನಾಡುತ್ತಾ ಈ ರೀತಿ ಸ್ಪರ್ಧೆಯನ್ನು ಏರ್ಪಡಿಸುವುದರಿಂದ ಮಕ್ಕಳಿಗೆ ಬುದ್ಧಿ ಶಕ್ತಿ ಬೆಳೆಯಲು ಅನುಕೂಲವಾಗುತ್ತದೆ ಎಂದು ತಿಳಿಸಿದರು.

## ಚಿತ್ರದುರ್ಗ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗದ ವತಿಯಿಂದ ದಿನಾಂಕ 30-3-2013 ರಂದು ಸಮುದಾಯ ಅಭಿವೃದ್ಧಿ ಶಿಬಿರವನ್ನು ನಡೆಸಲಾಯಿತು.

ಚಿತ್ರದುರ್ಗ ಜಿಲ್ಲಾ ನ್ಯಾಯಾಲಯದ ಹಿಂಬದಿ ಮತ್ತು ಮುಂಭಾಗದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಸ್ವಚ್ಛತೆಯನ್ನು ಮಾಡಿದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳಾದ ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಗೈಡ್ ಆಯುಕ್ತರು, ಶ್ರೀಮತಿ ಸುಜಯಾ ಪ್ರಕಾಶ್, ಕೇಂದ್ರ ಕಛೇರಿ ಚಿತ್ರದುರ್ಗ, ಶ್ರೀಮತಿ ವೀಣಾ ವಿಜಯ, ಶ್ರೀ ಧನ್‌ಪಾಲ, ಕೇಂದ್ರ ಕಛೇರಿ ಚಿತ್ರದುರ್ಗ, ಶ್ರೀಮತಿ ಸಿ.ಪಿ. ಸುಶೀಲ, ರೀನಾ, ವೀರಭದ್ರಪ್ಪ, ಕೇಂದ್ರ ಕಛೇರಿ ಚಿತ್ರದುರ್ಗ, ಶ್ರೀ ಸುರೇಶ್ ರಾಜು ಪಿ.ಎಲ್., ಶ್ರೀ ಶಿವಕುಮಾರ್ ಸ್ವಾಮಿ ಖಜಾಂಚಿ, ಶ್ರೀಮತಿ ಹಸೀನಾ ತಾಜ್ ಮುಂತಾದ ಪದಾಧಿಕಾರಿಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಶ್ರೀ ಎ.ಬಿ. ವಾರದ, ಜಿಲ್ಲಾ ಕಾರ್ಯದರ್ಶಿಗಳು ಸರ್ವರನ್ನು ಸ್ವಾಗತಿಸಿದರು. 50 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಾರ್ಕ್‌ನಲ್ಲಿ ಪಾರ್ಥೇನಿಯಂ ಗಿಡಗಳನ್ನು ಕಿತ್ತು ಸ್ವಚ್ಛಗೊಳಿಸಿದರು.

## ಕಾರವಾರ

ಕಾರವಾರ ಜಿಲ್ಲೆಯ ಕುಮಟಾ ತಾಲ್ಲೂಕಿನ ಮಿರ್ಜಾನ ಜನತಾ ವಿದ್ಯಾಲಯ ಪ್ರೌಢಶಾಲೆಯ 8 ಸ್ಕೌಟ್‌ಗಳು, ಸ್ಕೌಟ್ ಶಿಕ್ಷಕರಾದ ಶ್ರೀ ರಾಜು ರಾಮನಾಯ್ಕರವರ ಮುಂದಾಳತ್ವದಲ್ಲಿ ನೇಪಾಳದ ಚಿತ್ವಾನ ಪ್ರದೇಶದಲ್ಲಿ ನಡೆದ ಸಾರ್ಕ್ ದೇಶಗಳು ಹಾಗು ಇತರೇ ಅತಿಥಿ ದೇಶಗಳೊಂದಿಗೆ ಎರಡನೇ ನೇಪಾಳ ರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸಿದ್ದರು. ಈ ತಂಡವು ದಿನಾಂಕ 3-4-2013ರಂದು ಕುಮಟಾದಿಂದ ಹೊರಟು ಝಾನ್ಸಿ ಮೂಲಕ ಘೋರಖ್‌ಪುರ ಪಟ್ಟಣದ ಚೋಕರಾಜ ಇಂಟರ್ ಮಿಡಿಯಟ್ ಕಾಲೇಜ್‌ನಲ್ಲಿ ದಿನಾಂಕ 6-4-2013ರಂದು ಎಲ್ಲಾ ರಾಜ್ಯಗಳಿಂದ ಆಗಮಿಸಿದ ತಂಡದೊಂದಿಗೆ ಸೇರಿತು. ದಿನಾಂಕ 7-4-2013 ಮತ್ತು 8-4-2013 ಈ ಎರಡು ದಿವಸ ಪೂರ್ವ ತಯಾರಿ ಶಿಬಿರ ನಡೆಯಿತು. ಇದರಲ್ಲಿ ಜಾಂಬೂರಿಯಲ್ಲಿ ನಡೆಯಬೇಕಾದ ಎಲ್ಲಾ ಚಟುವಟಿಕೆಗಳ ಬಗ್ಗೆ ದೆಹಲಿಯಿಂದ ಬಂದ ಡೆಪ್ಯೂಟಿ ಡೈರೆಕ್ಟರ್ (ಬಾಯ್ ಪ್ರೋಗ್ರಾಂ) ಶ್ರೀ ಚಮೊಲಿ ಹಾಗು ಶ್ರೀವಾತ್ಸವರವರು ತರಬೇತಿ ನೀಡಿದರು. ದಿನಾಂಕ 10-4-2013ರಂದು ಮಧ್ಯಾಹ್ನ 12 ಗಂಟೆಗೆ ಉದ್ಘಾಟನಾ ಸಮಾರಂಭ ನಡೆಯಿತು. ನೇಪಾಳ ದೇಶದ ರಾಷ್ಟ್ರಪತಿಯವರು ಜಾಂಬೂರಿಯನ್ನು ಉದ್ಘಾಟಿಸಿದರು. ಸಂಜೆ ಪಥಸಂಚಲನ ಸ್ಪರ್ಧೆ ನಡೆಯಿತು. ಇದರಲ್ಲಿ ಕರ್ನಾಟಕ ತಂಡವು

ಭಾಗವಹಿಸಿತ್ತು. ದಿನಾಂಕ 11-4-2013ರಂದು ಫುಡ್ ಪ್ಲಾಜಾ ಏರ್ಪಡಿಸಿದ್ದರು. ದಿನಾಂಕ 12-4-2013 ರಂದು ವಸ್ತುಪ್ರದರ್ಶನ ಏರ್ಪಡಿಸಿದ್ದರು. ದಿನಾಂಕ 13-4-2013ರಂದು ಇಂಡಿಯಾ ಡೇ ಸೆಲೆಬ್ರೇಷನ್ ಏರ್ಪಡಿಸಲಾಗಿತ್ತು. ದಿನಾಂಕ 14-3-2014 ರಂದು ಶೈಕ್ಷಣಿಕ ಪ್ರವಾಸವನ್ನು ಏರ್ಪಡಿಸಲಾಗಿತ್ತು. ಅಂದು ಶಿಬಿರಾರ್ಥಿಗಳೆಲ್ಲರೂ ಚಿತ್ವಾನ ಪ್ರದೇಶದ ಗಂಗಾ ನದಿಯ ಉಪನದಿಯ ದಂಡೆಯಲ್ಲಿರುವ ದೇವಗಡ ಹಾಗೂ ಚಿತ್ವಾನ ರಾಷ್ಟ್ರೀಯ ಉದ್ಯಾನವನವನ್ನು ವೀಕ್ಷಿಸಿದರು. ಅಂದು ರಾತ್ರಿ ಅಂತರಾಷ್ಟ್ರೀಯ ಶಿಬಿರಾಗ್ನಿ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಇದರಲ್ಲಿ ಎಲ್ಲಾ ದೇಶದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಪ್ರತಿ ದಿನವೂ ಮಕ್ಕಳಿಗೆ ಸಾಹಸ ಕ್ರೀಡೆಗಳನ್ನು ಏರ್ಪಡಿಸಿದ್ದರು. ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ನಮ್ಮ ದೇಶದ ವಂದೇ ಮಾತರಂ ರೂಪಕ ಹಾಗು ಬಾಂಗ್ಲಾ ದೇಶದ ಜುಲೂ ಜನಾಂಗದ ಕಾಡು ನೃತ್ಯವು ಆಕರ್ಷಣೀಯವಾಗಿದ್ದಿತು. ದಿನಾಕ 15-4-2013 ರಂದು ಬೆಳಿಗ್ಗೆ 9 ಗಂಟೆಗೆ ಜಾಂಬೂರೇಟ್‌ನ ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಯಿತು. ನೇಪಾಳ ದೇಶದ ಶಿಕ್ಷಣ ಸಚಿವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ನೇಪಾಳ ರಾಷ್ಟ್ರದ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು.

## Bangalore South

The HAL Rover Scouts participated in the Mock Drill Organized by the Security Force and the Fire Department of Hindustan Aeronautics Limited to create awareness among the employees about the Bomb Threat and also to create awareness among the families and public about Gas Cylinder Burst. It also incuded how to deal with cases of Fire in their own or in neighbor's premises or in any other places where the crowd assembles.

There were four groups consisting of the Security, the Fire personal, the Rover Scouts and the medical Team. The four groups were assigned different jobs like. The Security to control the Crowd, the Fire Personnel to fight the fire and bring the injured from the place, the doctors to examine the partient and the Rovers to transport the injured to the Hospital.

ನಮಗೆ ತ್ಯಾಗ ಮಾಡುವ ಧೈರ್ಯಬೇಕಾದರೆ ನಾವು
ಉದ್ವೇಗವಶರಾಗಕೂಡದು. ಉದ್ವೇಗ ಕೇವಲ ಪ್ರಾಣಿಗಳಿಗೆ ಸೇರಿದ್ದು.
ಅವು ಸಂಪೂರ್ಣವಾಗಿ ಉದ್ವೇಗದ ಅಧೀನದಲ್ಲಿರುವುವು.

– ಸ್ವಾಮಿ ವಿವೇಕಾನಂದರು

**Notification No. BGS/NHQ/ D-3-1/3678/2012-13, Dated 14-3-2013**
**ISSUED BY NATIONAL HEADQUARTERS**

# Amendments in APRO Part-II

## Chapter-I Cub Section

**Rule No. 5. Uniform for Cub Master and Assistant Cub Master :-**

**A (Men)**

**(x) (a) The Name stripe :** containing "The Bharat Scouts & Guides" supplied by National Headquarters may be worn above the right pocket on the shirt,. The size of the stripe should be 11 cm X 2 c. the right corner of which would be tricolour of National Flag of the size of 3 cm X 2 cm and rest for the Title "The Bharat Scouts & Guides".

**(b) Name Plate :** A White plastic name plate of 8 cm length X 2 cm width inscribing the name of Adult Leader in black colour shall be worn above the right pocket of the shirt just below the BS&G stripe.

**Rule No. 7 CUB :-**

**(iii) Pravesh Requirements**

1 - Be told the first part of the Jungle story

6 - Be able to Sing Cub Prayer

**Rule No. 10 test for Pratham Charan :-**

(9) (f) - Use of basic communication device (telephone and cell phone)

(10) - Be able to sing Cub Prayer, **National Anthem** and BSG Flag Song.

**Note :** On completion of the tests a Pravesh Cub shall be awarded the Pratham Charan Badge by the L.A. of D.A. as the case may be, on the recommendation of the Cub Master. Pratham Charan Badge is a cloth badge. The Background shall be blue in colour and star shall be a five pointed star in While It shall be worn above the right pocket touching the seam of flap or at the same place on jersey. *It shall be worn above the right pocket and above the BSG Name stripe touching the seam of flap.*

**Rule No 13 Test for Chaturtha Charan**

(5) - Open a Small savings account at Post Office of Bank and know about saving of Electricity and drinking water or have knowledge about Computer. To be added

(9) - Be able to tell about two National Heroe / Freedom Fighter

(10) - Know about the National Flag and Bharat Scouts & Guides Flag.

(11) - Gain Knowledge and practice simple Yoga in daily life

**Rule No. 14 Cub Proficiency Badges**

(B) - A Tritiya Charan Cub will be eligible to wear White colour Cord after qualifying totally four Proficiency Badges on his right shoulder in addition to Tritiya Charan Badge.

| | | |
|---|---|---|
| Group I - Character | 1 | Collector |
| | 2 | Gardner |
| | 3 | Entertainer |
| Group V - Miscellaneous | 1 | World Conservation |
| | 2 | Heritage Badge |
| | 3 | Computer Awareness |

## Chapter-II Scout Section

**Rule No. 5. Uniform for Scoutmaster and Assistant Scoutmaster :-**

**(x) (a) The Name stripe :** containing "The Bharat Scouts & Guides" supplied by National Headquarters may be worn above the right pocket on the shirt,. The size of the stripe should be 11 cm X 2 cm the right corner of which would be tricolour of National Flag of the size of 3 cm X 2 cm and rest for the Title "The Bharat Scouts & Guides".

**(b) Name Plate :** A White plastic name plate of 8 cm length X 2 cm width inscribing the name of Adult Leader in black colour shall be worn above the right pocket of the shirt just below the BS&G stripe.

**Rule No. 7 Scout :-**

**(2) (II) Pravesh Requirments :-**

(6) - Know the Composition and significance of the National Flag, The. Bharat Scouts & Guides Flag, the World Scout Flag **and Flag Etiquette.**

(8) - Attende atleast Four Troop Meetings **spread over a period of Three months.**

**Rule No. 8 Scout Uniform**

(VI) - Shoulder Badge of 6 to 8 cm X 1.5 cm with white background and Red Border and the serial No. and Name of the group in Red letters shall be worn on both the shoulders immediately below the seam **with a little curve.**

**Rule No. 10 Test for Pratham Sopan**

(1) - Learn about your Patrol, its flag, yell or song and Patrol Corner and Patorl Call **and participate in Patorl in Council.**

(6) - Participate in Troop Game and **Patrol Game**

(8)- Know the contents of First Aid Box. Demonstrate the use of Roller Bandages and Triangular Bandages. Collar and Cuff sling and **Arm sling.** Render First - Aid for Cut and Scratches

(13) - Continue to do a Good Turn daily and maintain a diary atleast for a month.

(14) - Develop an interst in Modern Gadgets like Mobile Phones, Computer, Tablets, Internet etc., and write about those gadgets

(15) - Learn B.P.'s Six exercises and Surya Namaskar and practice at home daily

**Rule No. 11 Tests for Dwitiya Sopan :-**

**(2) Fire**

(1) - Lay and light a wood fire in the open with not more than two match sticks, clean and light a kerosene / gas stove and **have a knowledge o Fire Extinguishers.**

**(4) Compass**

(ii) - Be able to find North by atleast two Constellations **during the night and two other mehtods during the day.**

**New addition :**

(12) (f) - Have / create an E-mail ID and send / communicate at least two e-mails.

(g) - Know the usage of Mobile phones / internet and their applications in the development of the country

**Rule No. 12 Tritiya Sopan**

(9) - (a) Cook in the open, meals enough for four persons **using backwoodsman cooking.**

**(b) Have knowledge in using house hold tools like screw driver, Tester, cutting Plier, hammer and Knife.**

**New Addition :-**

(17) - Know and understand the disease Tuberculosis - Its Symptoms, Treatment and precautionary measures to prevent the disease. Knowledge about Directly Observed Treatment (DOTS)

(18) - Know and understand about Mobile / internet Banking / ATMs and safety and security measures required while using those.

(19) - Using basic electrical / electronic devices, making a gadget useful at home, underthe supervision of an adilt.

**Rule No. 13 Tests for Rajyapuraskar Badge :-**

**New Addition**

(4) - Have a knowledge about the BSG website & gain informations about your Region

**Rule No. 14 (B) Tests for Rashtrapati Scout Award**

(10) - Have knowledge about the WOSM website and gain information about Asia Pacific Region.

(11) - Help the boy to gain informations and experience about commonly used technologies. OR

Learn and understand the positive and negative points of the above gadgets from you parents / teachers / SM

## Chapter-III Rover Section

**Rule No. 9 Pravesh Requirements :-**

(1) - Read "Scouting for Boys" and books on Rovering prescibed by the sponsor

(3) - If a young man has never been a Scout and wishes to join a Crew a fresh, he should quality for Pravesh requirements of Scout Section and work for atleast three months as a aspirant Rover before Investiture.

(4) - Have knowledge of B.P. Six and Simple Drill

**Rule No. 10 Rover Uniform**

(a) (ii) - Shoulder Stripes each 5 cm long and 1.5 cm wide 3 shoulder stripes shall be of Red, Green and blue in colour Red above and Blue below and apart 2 cm in between each stripe.

**Rule No. 12 Tests for Praveen**

(5) - Have knowledge in **Knots and Lashing,** Compass, First-Aid and estimation ip to **Dwitiya Sopan** level in Scout Section

(10) - Participate in any one of the Following :-

(1) Rock Climbing (2) Trekking **(3) Rafting (4) Para-sailing (5) Over Night Hike** or Complete Adventure Programme of National Adventure Institute or other recognized Institutes

**Rule No. 13 Tests for Nipun**

(10) Qualify for Rambler's Badge or Ecologist Badge or Disaster Management. New Addition

(13) Have knowledge in Camp-Craft, pioneering, Mapping, First-Aid and estima¬tion up to Tritiya Sopan level in Scout Section.

**Rule No. 14 Rashtrapati Rover Award :-**

(4) Lead a small contingent of Rovers of your Crew to participate in Scout activ¬ity preferably in neighboring State or District **Or Participate in any National or Regional Rover Event**

# Amendments in APRO Part-III

## Chapter-I Bulbul Section

**Rule No 5. Uniform for the Flock Leader and the Assistant Flock Leader :-**

**(a) Compulsory**

**(x) The Name stripe :** containing "The Bharat Scouts & Guides" supplied by National Headquarters may be worn above the right pocket on the blouse,. The size of the stripe should be 11 cm X 2 c. the right corner of which would be tricolour of National Flag of the size of 3 cm X 2 cm and rest for the Title "The Bharat Scouts & Guides"

**Rule No 10 Scheme for Advancement of a Bulbul :-**

**Note**

1 - A girl can be invested as a Bulbul on completion of five years of age and work for atleast three months and complete the requirement of the Pravesh Test

**Rule No.11 Tests for Komal Pankh :-**

(iv) - Learn and practice B.P.'s Six Exercises from 1 to 6 regularly and maintain good health habits

(ix) (e) - Use a Telephone or Mobile Phone.

(x) - Be able to Sing Bulbul Prayer song and Flag Song and Know about BSG Flag.

**Rule No. 12 Tests for Rajat Pankh**

(ix) (e) -Trim fill light and extinguish a hurricane lantern OR Emergency light candle and Match-Box

**Rule No.13 Tests for Suvarna Pankh :-**

(iii) - Have knowledge of Village /town regarding availability of Railway /Bus and Fire service/ Police Station and Ambulance services.

**Rule No. 14 Tests for Heerak Pankh :-**

(iv) - Tie Bow-line, a Round Turn and Two Half-hitches, Whipping, and their uses.

**Rule No. 15 Proficiency Badges**

(ii) Group V

1. World Conservation 2. Heritage Badge 3. Computer Awareness

## Chapter-II Guide Section

**Rule No 5. Uniform for the Guide Captain and the Assistant Guide Captain :-**

**(a) Compulsory**

**(xi) The Name stripe :** containing "The Bharat Scouts & Guides" supplied by National Headquarters may be worn above the right pocket on the blouse,. The size of the stripe should be 11 cm x 2 c. the right corner of which would be tricolour of National Flag of the size of 3cm x 2 cm and rest for the Title "The Bharat Scouts & Guides"

**Rule No. 9 The Guide :-**

(iii) (f) - Know the composition and significance of the National Flag, the Bharat Scouts & Guides Flag and the World Guide Flag **and the Flag Etiquette Rule No. 10 Guide Uniform: A Guide Shall wear Uniform as given below :-**

**(a) Compulsory :**

(viii) - A shoulder Badge of 6 to 8 c.m. x 1.5 c.m with White background and Red Border and the serial No and Name of the Group in Red Letters shall be worn on both the shoulders just below the seam **with a little curve**

**Rule No. 14 Tests for Pratham Sopan**

(ii) - Practice B.P. Six Exercise **and** Six Asanas or Surya Namaskar

(viii) - Know Contents of First-Aid Box. Demonstrate the use of Roller Bandage and triangular Bandages, Collar and Culf sling and Arm sling. Render First-Aid for cut and scratches

(xii) (a) - Participate in any two of the following activities : **Point No (b) is compulsory and any one from (a) and (c)**

(a) Undertake a nature study project in consultation with your Patrol Leader and submit the report within 10 days.

(b) Discuss with your Guide Captain and render some service involving any one of the points of Guide Law and submit a report to your Guide Captain within a week.

(c) Visit a Village Panchayat Samiti / Block Development Office and learn about the services rendered by one such public organization and submit a report to your Guide Captain within 10 days.

**Rule No. 15 Tests for Dwitiya Sopan :-**

(xi) - Participate in two Prayer meetings in your Company

(xii) - Qualify for **any Two** from the following Proficiency Badges :-

(i) Cook, (ii) Debater, (iii) Friends to Animals, (iv) Gardner, (v) Handy Women, (vi) Cyclist (vii) Laundress. (Viii) Beautician. (ix) Event Manager (x) Computer Skill

**Rule No.16 Tests for Tritiya Sopan**

(v) (b) - Map Making by Triangulation or Plain Table or Road Traverse Method

(xiv) - Complete the following and prepare a log book (a) Role Play on National Integration in Costumes (b) **Knowledge on WAGGGS ( World Association of Girl Guides and Girl Scouts)**

(xvii) - Know and Understand the Disease Tuberculosis - its Symptoms, Treat¬ment and precautionary measures to prevent the disease. Knowledge about Directly Observed Treatment (DOTS)

**Rule No. 18 Rashtrapati Guide Award**

**(B) Tests for Rashtrapati Guide Award**

(vi) - Undertake Hike on foot for 8 K.M. along with two or more guides or a Cycle Hike for 15 K.M. and the Hike Report should be submitted to the Guide Captain within three days after completion of the hike

## Chapter-III Ranger Section

**Rule No. 18 Test for Praveen**

(ix) -Qualify for any one of the following 05 (five) Proficiency Badge :

(a) Literacy (b) Population Education (c) World Friendship (d) Sanitation Promoter (e) Pollution Controlx

**Rule No. 20 Rashtrapati Ranger Award :-**

(iv) - Participate in a Guide activity preferably in neighbouring State or District **atleast for 05 (five) days**

(vi) - Promote and participate in a Joint Project undertaken with any of the organizations such as (a) Lion's Club (b) Rotary Club (c) Indian Red Cross (d) St. John's Ambulance Association (e) Youth Hostel Association (f) Jaycees or any other organization with the permission with your Ranger's Council **at least for 15 (fifteen) days**

(ix) - Qualify any 02 (TWO) Proficiency Badges of the following :-

(a) Hostess (b) Fashion Designing (c) Information Technology (d) Journalism (e) HIV / AIDS (f) Disaster Preparedness

ಅಭಿನಂದನೆಗಳು







ರಾಯಚೂರು ಟೌನ್ ಇನ್‌ಫೆಂಟ್ ಜೀಸಸ್
ಸರಕಾರಿ ಪದವಿಪೂರ್ವ ಕಾಲೇಜಿನ ಸ್ಕೌಟ್
ಕು. ಕಾರ್ತಿಕ್ ಎಂ. ಕುಲಕರ್ಣಿ
2012–13ನೇ ಸಾಲಿನ ದ್ವಿತೀಯ ಪದವಿಪೂರ್ವ
ಪರೀಕ್ಷೆಯಲ್ಲಿ ವಿಜ್ಞಾನ ವಿಭಾಗದಲ್ಲಿ
ಶೇ. 95 ಅಂಕ ಗಳಿಸಿರುತ್ತಾನೆ.

ದಾವಣಗೆರೆ ಸೆಂಟ್ ಪಾಲ್ಸ್ ಕಾನ್ವೆಂಟ್
ಪ್ರೌಢಶಾಲೆಯ ಗೈಡ್
ಕು. ಭಾವನ ಹೆಚ್.ವಿ.
2012–13ನೇ ಸಾಲಿನ ಎಸ್.ಎಸ್.ಎಲ್.ಸಿ.
ಪರೀಕ್ಷೆಯಲ್ಲಿ ಶೇ. 98 ಅಂಕಗಳು
ಗಳಿಸಿರುತ್ತಾಳೆ.

*......ಹಿಂದಿನ ಸಂಚಿಕೆಯಿಂದ*

ಅಧ್ಯಾಯ–3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ–9

# ಶಿಬಿರ ಕೌಶಲ್ಯ (CAMP CRAFT)

## ಶಿಬಿರದಲ್ಲಿ ಸೌಖ್ಯ–ಆವರಣ–ಶಿಬಿರ ಸರಂಜಾಮು–ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು–ಶಿಬಿರವನ್ನು ಚೊಕ್ಕಟವಾಗಿಡುವುದು

**ಗುಡಾರಗಳಿಗೆ :** ಬಕೆಟ್ಟು, ಲಾಟೀನು, ಮೋಂಬತ್ತಿ, ಬೆಂಕಿಪಟ್ಟಣ, ಸುತ್ತಿಗೆ, ಬೇಸಿನ್, ಸನಿಕೆ, ಕೊಡಲಿ, ಹಗ್ಗ, ಪೆಟ್ರೋಲ್ ಪತಾಕೆ, ಸಾಮಾನುಗಳನ್ನು ನೇತು ಹಾಕುವ ಪಟ್ಟಿ ಇತ್ಯಾದಿ.

**ಅಡಿಗೆ ಮನೆಗೆ :** ಬಾಂಡ್ಲಿ, ಡಬ್ಬರಿ, ಕೆಟಲ್, ಜಾಲರ, ಬಕೆಟ್, ಚಾಕು, ಸೌಟು, ಹಳೇಬಟ್ಟೆ (ಚೊಕ್ಕಟ ಮಾಡಲು) ಸಾಮಾನುಗಳು (ಅಕ್ಕಿ, ಬೇಳೆ ಇತ್ಯಾದಿ., ದಿನಸಿ) ತರಕಾರಿಗಳು ಮತ್ತು ಅವುಗಳನ್ನಿಡಲು ಚೀಲಗಳು, ಬುಟ್ಟಿಗಳು, ಚಮಚೆಗಳು, ಬೆಂಕಿಪಟ್ಟಣ, ಮೋಂಬತ್ತಿ, ತಟ್ಟೆಗಳು ಇತ್ಯಾದಿ.

**ಪ್ರತಿ ಸ್ಕೌಟೂ ತರಬೇಕಾದುದು :** ಟಾರ್ಪಾಲ್, 2 ಬ್ಲಾಂಕೆಟ್‌ಗಳು, ಸಾಮಾನುಗಳನ್ನು ಕಟ್ಟಲು ಹಗ್ಗಗಳು, ಹುಲ್ಲು ಮೆತ್ತೆ (ಹುಲ್ಲು ಮತ್ತು ದಾರ ಉಪಯೋಗಿಸಿ ಶಿಬಿರದಲ್ಲಿಯೇ ಮಾಡಬಹುದು). ದಿನಸಿ ಚೀಲಗಳು, ಪ್ರತಿ ಸ್ಕೌಟೂ ಬೇರೆಬೇರೆಯಾಗಿ ಮಲಗಲು ಬ್ಲಾಂಕೆಟ್‌ಗಳು ಮತ್ತು ಮೆತ್ತೆಗಳನ್ನು ಒದಗಿಸಬೇಕು.

**ವೈಯಕ್ತಿಕ ಸಾಮಾನುಗಳು :** (ಪ್ರತಿ ಸ್ಕೌಟ್‌ಗೂ ಬೇಕಾದುದು) ಪೂರಾ ಸಮವಸ್ತ್ರ (ಬೆರ್ರೆಯೂ ಸೇರಿ), ಪೈಜಾಮ (ರಾತ್ರಿ ವೇಳೆ ಧರಿಸಲು ಬಟ್ಟೆ), ಷೂಸ್, ಸ್ನಾನಕ್ಕೆ ಬಟ್ಟೆ, ಟವಲ್, ಕರವಸ್ತ್ರ, ರೈನ್‌ಕೋಟು, ಹೆಚ್ಚುವರಿ ಸ್ವೆಟರ್, ಸೂಜಿ, ದಾರ, ಬ್ಲೇಡು, ಕತ್ತರಿ, ಗುಂಡಿ ಇತ್ಯಾದಿ. (ರಿಪೇರಿ ಮಾಡುವ ಸಾಮಾನುಗಳಿರುವ ಚೀಲ) ತಟ್ಟೆ, ಬಟ್ಟಲು, ಮಗ್ಗು, ಚಾಕು, ಚಮಚ, ಫೋರ್ಕು, ಬೆಂಕಿಪಟ್ಟ, ಮೋಂಬತ್ತಿ, ಸೋಪು, ಬ್ರಷ್ಷು, ಪೇಸ್ಟು, ಬಾಚಣಿಗೆ, ಹ್ಯಾವರ್ ಸ್ಯಾಕ್ ಇತ್ಯಾದಿ.

ನುರಿತ ಶಿಬಿರವಾಸಿಯು, ಎಲ್ಲಾ ವೇಳೆಗಳಲ್ಲಿಯೂ, ತನ್ನ ಬಳಿಯಲ್ಲಿ, ಮೂರು ನಾಲ್ಕು ಬಟ್ಟೆಯ ಚೀಲಗಳನ್ನು (ದಿನಸಿ ಸಾಮಾನು ಒಯ್ಯಲು) ಇಟ್ಟುಕೊಂಡಿರುತ್ತಾನೆ. ಈ ಚೀಲಗಳನ್ನು ಶಿಬಿರಕ್ಕೆ ಮುಂಚಿತವಾಗಿ ತಾನೇ ಹೊಲಿದುಕೊಳ್ಳುತ್ತಾನೆ.

ಈ ದಿನಸಿ ಚೀಲಗಳು 9 ಸೆಂ.ಮೀ. X 5 ಸೆಂ.ಮೀ. ಇದ್ದರೆ ಸಾಕು. ಸಾಮಾನುಗಳನ್ನು ತುಂಬಿದ ಮೇಲೆ, ಲಾಡಿಗಳನ್ನೆಳೆದು, ಚೀಲಗಳ ಮೂತಿಯನ್ನು ಕಟ್ಟಲು ಬರುತ್ತದೆ. ನೀವು ಚೀಲಗಳನ್ನು ಹೊಲೆಯುವಾಗ, ಒಂದೆರಡು ದೊಡ್ಡ ಚೀಲಗಳನ್ನೂ, ಹೊಲೆದುಕೊಂಡರೆ, ಅನೇಕ ಚಿಲ್ಲರೆ ಸಾಮಾನುಗಳನ್ನು ತುಂಬಲು ಬರುತ್ತದೆ.

ನನ್ನ ಬಳಿ, ನನ್ನ ಹೆಚ್ಚುವರಿ ಷೂಸ್‌ಗಳನ್ನು ಕಟ್ಟಲೂ ಸಹ, ಒಂದು ಚೀಲವನ್ನಿಟ್ಟುಕೊಂಡಿದ್ದೇನೆ. ಇದರಿಂದ, ಜೊತೆಯಲ್ಲಿ ಇರುವ ಬಟ್ಟೆಗಳು ಕೊಳೆಯಾಗುವುದಿಲ್ಲ.

### ಆಹಾರ

ತಾಜಾ ಮಾಂಸವನ್ನು ಉಪಯೋಗಿಸುವುದಾದರೆ, ಆ ಬಗ್ಗೆ ಖಚಿತಪಡಿಸಿಕೊಳ್ಳಬೇಕು. ಮೊಟ್ಟೆಗಳು, ಅನ್ನ, ಅಂಬಲಿ, ಗಂಜಿ ಇತ್ಯಾದಿಗಳನ್ನು ಸ್ವಲ್ಪ ಹೆಚ್ಚು ಕಾಲ ಕೆಡದಂತೆ ಇಡಬಹುದು. ಹಣ್ಣುಗಳು ಬೇಯಿಸಲೂ ಸುಲಭ, ತಿನ್ನಲೂ ಒಳ್ಳೆಯದು. ಚಾಕೊಲೇಟ್‌ಗಳು ಶಿಬಿರದಲ್ಲಿಯೂ, ನಡಿಗೆಯ ವೇಳೆಯಲ್ಲಿಯೂ ಉಪಯೋಗಕ್ಕೆ ಬರುತ್ತವೆ.

ಬೋಯರ್‌ಗಳೂ, ದಕ್ಷಿಣ ಆಫ್ರಿಕಾದ ಬೇಟೆಗಾರರೂ, ಶಿಬಿರದಲ್ಲಿ ಒಳ್ಳೆಯ ರೀತಿಯ ಬ್ರೆಡ್ ಅನ್ನೂ, ರಸ್ಕ್ ಅನ್ನೂ ಉಪಯೋಗಿಸುತ್ತಾರೆ. ರಸ್ಕ್ ತಯಾರಿಸುವುದು ಬಹಳ ಸುಲಭ. ಒಂದೆರಡು ದಿನದ ಹಳೆಯ ಬ್ರೆಡ್ ಅನ್ನು, ಬೇಕರನ ಬಳಿ ಅರ್ಧ ಬೆಲೆಗೆ ಕೊಂಡುಕೊಳ್ಳಿ. ಅದನ್ನು ಚೌಕಾಕಾರದ, ಸಣ್ಣ ಸಣ್ಣ ಬಿಲ್ಲೆಗಳನ್ನಾಗಿ ಕತ್ತರಿಸಿ, ಟೋಸ್ಟರ್‌ನಲ್ಲಿ ಸುಟ್ಟುಕೊಂಡು (ಅವು ಗಟ್ಟಿಯಾಗುವವರೆಗೆ) ಬಳಿಕ ಉಪಯೋಗಿಸಬೇಕು. ಇದು ಬ್ರೆಡ್ ಬದಲು ಬಹಳ ಒಳ್ಳೆಯದು, ಶಿಬಿರದಲ್ಲಿ ಮೃದುವಾದ ಬ್ರೆಡ್ ಬಹಳ ಬೇಗ ಹುಳಿಬಂದು ಕೆಟ್ಟು ಹೋಗುತ್ತದೆ.

## ಶಿಬಿರದ ನ್ಯಾಸ

ಸೈನ್ಯಗಳ ಶಿಬಿರದಲ್ಲಿರುವಂತೆ, ಸ್ಕೌಟ್ ಶಿಬಿರದಲ್ಲಿ ಟೆಂಟ್‌ಗಳು ಸಾಲು ಸಾಲಾಗಿರುವುದಿಲ್ಲ. ಬದಲಿಗೆ, ಮಧ್ಯದಲ್ಲಿ ಸ್ಕೌಟ್ ಮಾಸ್ಟರ್ ಗುಡಾರವಿರುತ್ತದೆ. (ಜೊತೆಗೆ ಧ್ವಜ ವೃತ್ತ, ಶಿಬಿರಾಗ್ನಿ ವೃತ್ತ ಮತ್ತು ಆಟದ ಬಯಲು ಇರುತ್ತವೆ) ಅದರ ಸುತ್ತಲೂ ಒಂದೊಂದಕ್ಕೂ 50 ರಿಂದ 100 ಮೀ.ಗಳ ದೂರದಲ್ಲಿ, ವರ್ತುಲಾಕಾರದಲ್ಲಿ ಅಲ್ಲಲ್ಲಿ ಪೆಟ್ರೋಲ್‌ಗಳ ಗುಡಾರಗಳಿರುತ್ತವೆ.

## ಗುಡಾರಗಳನ್ನು ಹಾಕುವುದು

ಶಿಬಿರದ ಆವರಣವನ್ನು ಆರಿಸಿಕೊಂಡು ಮೇಲೆ, ಗುಡಾರಗಳನ್ನು ಹಾಕಬೇಕು. ಗುಡಾರಗಳ ಮುಂಭಾಗವು ಗಾಳಿ ಬೀಸುವ ದಿಕ್ಕಿಗೆ ದೂರವಾಗಿ ಇರಬೇಕು.

ಗುಡಾರದ ಸುತ್ತಲೂ 5 ಸೆಂ.ಮೀ. ಆಳದ ಕಾಲುವೆಯನ್ನು ತೆಗೆಯಬೇಕು. ಇದರಿಂದ ಮಳೆಯು ಜೋರಾಗಿ ಬಂದ ಪಕ್ಷದಲ್ಲಿ, ನೀರು ಒಳಕ್ಕೆ ನುಗ್ಗದಂತೆ, ತಡೆಹಿಡಿದಂತಾಗುತ್ತದೆ.



ನಿಮ್ಮ ಗುಡಾರವನ್ನು ಸರಿಯಾದ ರೀತಿಯಲ್ಲಿ ಹಾಕಿದ್ದರೆ ಮಳೆ ಬಂದಾಗ ಆರಾಮವಾಗಿ ನಗುನಗುತ್ತಿರಬಹುದು.



ಟಾಮಿ : ಕೋಮಲಪಾದ ಸ್ಕೌಟು ನಂ. 4
ಟಾಮಿಯು ಶಿಬಿರಕ್ಕೆ ಹೋಗುತ್ತಾನೆ.
ಶಿಬಿರಕ್ಕೆ ಬಂದಾಗ ಆಸೆಗಳ ಬುಗ್ಗೆ;
ಬಂದ ಮೇಲವನು ಕಂಡ, ಗುಡಾರಗಳ ಆಧಾರ ಹಗ್ಗ,
ಕಣ್ಣುಮುಚ್ಚಿ ಎಡವಿ, ಹೊಡೆದ ಅವುಗಳಿಗೆ ಲಗ್ಗೆ.

ಈ ಕಾಲುವೆಯ ನೀರನ್ನು, ಗುಡಾರದಿಂದ ದೂರವಾಗಿ ಇಳಿತದ ಕಡೆಗೆ ಒಯ್ಯಬೇಕು.

ಗುಡಾರದ ಕಂಬದ ಬಳಿ ಒಂದು ಸಣ್ಣ ಬಟ್ಟಲಿನ ಗಾತ್ರದ ಗುಂಡಿ (ಹಳ್ಳವನ್ನು) ತೋಡಿರಬೇಕು. ಮಳೆಯು ಬಂದಾಗ ಕಂಬಗಳನ್ನು ಕೂಡಲೇ ಗುಂಡಿಯೊಳಕ್ಕೆ ಇಳಿಸಬಹುದು. ಇದರಿಂದ ಮಳೆಯಲ್ಲಿ ಹಗ್ಗಗಳು ನೆನೆದು ಸೆಟೆದುಕೊಳ್ಳುವ ಬಗ್ಗೆ ಎಚ್ಚರವಹಿಸಿದಂತಾಗುತ್ತದೆ.

..........ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine


## A Challenge from the World Chief Guide - Olave, Lady Baden-Powell



*Just one more test passed for gaining an Emblem or Badge.*

*Just one more recruit to join up with your patorl or Unit.*

*Just one more Guider to be found, for Just one more Unit.*

*Just one more helper and supporter and member of the fellowship of Guiding and then above all ---*

*Just one more "good turn" service to the community.*

*Just one more kind thought and Prayer that the Spirit of Guiding may spread far and wide throughout the world.*


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227





**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು

# CONGRATULATIONS

**The following Adult Leaders have been awarded "Asia Pacific Adult Leader's Achievements Award -2012"**



**Smt. SHANTHA V. ACHARYA**
***State Commissioner (Guides)***



**Smt. S.K. PRABHA**
***Unit Leader***



**Smt. K.H. GAYATHRI GOWDA**
***Unit Leader***



ದಿನಾಂಕ 21.03.2013ರಂದು ಮೈಸೂರು ಜಿಲ್ಲಾ ಸುವರ್ಣ ಲೇಡಿಸ್ ಕ್ಲಬ್ ವತಿಯಿಂದ ಶ್ರೀಮತಿ ಶಾಂತಾ ಗಿರಿಯಣ್ಣ, ಎಲ್.ಟಿ. (ಗೈಡ್)ರವರನ್ನು ಅಂದಿನ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಸ್.ಎ. ರಾಮದಾಸ್‌ರವರು "ಉತ್ತಮ ಸಮಾಜ ಸೇವಾ ಮಹಿಳೆ" ಪ್ರಶಸ್ತಿಯನ್ನು ನೀಡಿ ಸನ್ಮಾನಿಸುತ್ತಿರುವುದು.



ದಿನಾಂಕ 23.03.2013ರಂದು ಹಾಸನದಲ್ಲಿ ನಡೆದ ರೋವರ್ಸ್ ಮತ್ತು ರೇಂಜರ್ಸ್‌ಗಳ ವಾರ್ಷಿಕ ಶಿಬಿರವನ್ನು ಉದ್ಘಾಟಿಸುತ್ತಿರುವ ಪ್ರಾಂಶುಪಾಲರಾದ ಡಾ. ಎ.ಎಲ್. ಮುರಳೀಧರ. ಪ್ರೊ. ಲತಾ ಕೆ., ರೇಂಜರ್ ಲೀಡರ್, ಪ್ರೊ. ಖಲೀಲ್ ಅಹಮದ್, ರೋವರ್ ಲೀಡರ್, ಪ್ರೊ. ಹೆಚ್.ಎಸ್. ಗಂಗೇಗೌಡ, ಶ್ರೀಮತಿ ಕಾಂಚನಮಾಲಾ, ಡಿ.ಟಿ.ಸಿ. (ಗೈಡ್), ಎ.ಎಸ್.ಓ.ಸಿ. ಶ್ರೀ ಎಲ್.ಟಿ. ಲೋಕೇಶ್‌ರವರನ್ನು ಕಾಣಬಹುದು.




ದಿನಾಂಕ 10.04.2013ರಿಂದ 15.04.2013ರವರೆಗೆ ನೇಪಾಳದಲ್ಲಿ ನಡೆದ ಎರಡನೇ ರಾಷ್ಟ್ರೀಯ ಜಾಂಬೋರಿಯಲ್ಲಿ ಭಾಗವಹಿಸಿದ ಭಾರತದ ತಂಡ.



ದಿನಾಂಕ 15.05.2013ರಿಂದ 17.05.2013ರವರೆಗೆ ಶಿರಸಿಯಲ್ಲಿ ನಡೆದ ರಾಜ್ಯ ಪುರಸ್ಕಾರ ಪೂರ್ವ ಸಿದ್ಧತಾ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು.



**Rover Scouts of HAL Carrying the injured to the waiting ambulance during the Mock Drill Organized by HAL Security.**



14 ರಿಂದ 15 ಏಪ್ರಿಲ್ 2013ರ ವರೆಗೆ ಬಿಜಾಪುರ ಜಿಲ್ಲೆ ಬುರಾಣಪುರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗಾಗಿ ನಡೆದ ರಾಷ್ಟ್ರಪತಿ ಪದಕ ಪೂರ್ವ ಸಿದ್ಧತಾ ಶಿಬಿರದಲ್ಲಿ ಅಗ್ನಿಶಾಮಕ ದಳದವರಿಂದ ಪ್ರಾತ್ಯಕ್ಷಿಕೆ.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28, 30 Every Month (No. of Pages : 4 + 24 = 28)









ದಿನಾಂಕ 18 ರಿಂದ 22 ಏಪ್ರಿಲ್ 2013ರವರೆಗೆ ಡಾ. ಅನಿಬೆಸೆಂಟ್ ಪಾರ್ಕ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ನಡೆದ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಭಾವಿ ತರಬೇತಿ ಶಿಬಿರದಲ್ಲಿ ನಡೆದ ವಿವಿಧ ಚಟುವಟಿಕೆಗಳ ವಿಹಂಗಮ ನೋಟ



SCOUTS
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**